*

*The Department of Public Instruction, Mysore.*

# PADYASÁRA

## Part I

REVISED EDITION

WITH NOTES BY

**S. G. NARASIMHACHAR,**

*The Late Kannada Translator Education Department*

# ಪದ್ಯಸಾರ

ಪ್ರಥಮ ಭಾಗ

ಪರಿಷ್ಕೃತ ಮುದ್ರಣ

ಇದರ ಟಿಪ್ಪಣವು ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಟ್ರಾನ್ಸ್ಲೇಟರಾಗಿದ್ದ
ಎಸ್. ಜಿ. ನರಸಿಂಹಾಚಾರ್ಯರಿಂದ ಬರೆಯಲ್ಪಟ್ಟು
ಮುದ್ರಿತವಾಯಿತು

Seventh Edition, 15,000 Copies

ಬೆಂಗಳೂರು

ಸರ್ಕಾರದ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1924

# ಪೀಠಿಕೆ.

ಪದ್ಯಸಾರವನ್ನು ಪರಿಷ್ಕರಿಸಿ ಮುದ್ರಿಸುವುದು ಅವಶ್ಯಕವೆಂದು ಮೈಸೂರ್ ಟೆಕ್ಸ್ಟ್ ಬುಕ್ ಕನ್ನಡ ಸಬ್ ಕಮಿಟಿಯವರು ನಿಶ್ಚಯಿಸಿ, ಈ ಉದ್ದೇಶವನ್ನು ನೆರವೇರಿಸಲು,

(1) ಮ|| ರಾ|| ಆರ್. ನರಸಿಂಹಾಚಾರ್, ಎಂ. ಎ.,
(2) ,, ಆರ್. ರಘುನಾಥರಾವ್, ಬಿ. ಎ.,
(3) ,, ಎಸ್. ಜಿ. ನರಸಿಂಹಾಚಾರ್,
(4) ,, ಬಿ. ಸುಬ್ಬಣ್ಣ,
(5) ,, ಎಂ. ಬಿ. ಶ್ರೀನಿವಾಸಯ್ಯಂಗಾರ್, ಎಂ. ಎ.,

ಇವರುಗಳನ್ನು ಒಂದು ಉಪಸಭೆಯಾಗಿ ಗೊತ್ತುಮಾಡಿ ಅವರಿಗೆ ಈ ಕಾರ್ಯವನ್ನು ವಹಿಸಿದರು.

ಈ ಉಪಸಭೆಯವರು ಹಿಂದಣ ಪದ್ಯಸಾರದಲ್ಲಿ ಕೆಲವು ಭಾಗಗಳನ್ನು ನಿಲ್ಲಿಸಿಕೊಂಡು ಅದರಲ್ಲಿಲ್ಲದಿದ್ದ ಜೈನ, ಬ್ರಾಹ್ಮಣ, ವೀರಶೈವ ಕವಿಗಳ ಉದ್ಗ್ರಂಥಗಳಿಂದ ಕೆಲವು ಪದ್ಯಗಳನ್ನು ಹೊಸದಾಗಿ ಆಯ್ದುಕೊಂಡು ಸೇರಿಸಿ ಗ್ರಂಥವನ್ನು ದೊಡ್ಡದು ಮಾಡಿ ಎರಡು ಸಂಪುಟವಾಗಿ ಅಚ್ಚು ಹಾಕಿಸಬೇಕೆಂದು ನಿಶ್ಚಯಿಸಿ ಪ್ರಥಮ ಸಂಪುಟಕ್ಕೆ ಬೇಕಾದ ತ್ರಿಪದಿ, ಚೌಪದಿ, ಸಾಂಗತ್ಯ, ಕುಸುಮ ಷಟ್ಪದಿ, ಪರಿವರ್ಧಿನೀಷಟ್ಪದಿ, ಮೊದಲಾದುವುಗಳಲ್ಲಿ ಬರೆದಿರುವ ಗ್ರಂಥಭಾಗಗಳನ್ನು ತಾವೇ ಸಂಗ್ರಹಿಸಿ ಮ|| ರಾ|| ಎಂ. ಬಿ. ಶ್ರೀನಿವಾಸಯ್ಯಂಗಾರ್, ಎಂ. ಎ., ಯವರ ವಶಕ್ಕೆ ಕೊಟ್ಟು ಅವುಗಳನ್ನು ಪಾಠಶಾಲೆಯ ವಿದ್ಯಾರ್ಥಿಗಳಿಗೆ ಬೋಧಿಸಲು ಅರ್ಹವಾದ ರೀತಿಯಲ್ಲಿ ಮೊದಲು ಮೊದಲು ಸುಲಭ ಪಾಠಗಳೂ ಕ್ರಮಕ್ರಮವಾಗಿ ಕಠಿನಪಾಠಗಳೂ ಬರುವಂತೆ ಕ್ರಮಪಡಿಸಿ ಪಾಠಗಳ ಆದಿಯಲ್ಲಿ ಸಂಗ್ರಹವಾಗಿ ಕವಿಚರಿತ್ರೆಯನ್ನು ಬರೆದು ಸೇರಿಸಿ ಅಚ್ಚು ಹಾಕಿಸಿಕೊಡಬೇಕೆಂದು ಅಪೇಕ್ಷಿಸಿದರು.

ತದನುಸಾರವಾಗಿ ಈ ಪ್ರಥಮ ಸಂಪುಟವು ಅವರಿಂದ ಮುದ್ರಿತವಾಯಿತು.

ಇದಕ್ಕೆ ಯಥೋಚಿತವಾದ ಟಿಪ್ಪಣಿಯನ್ನು ಬರೆದು ಗ್ರಂಥಾಂತದಲ್ಲಿ ಸೇರಿಸಿ ಮುದ್ರಿಸಿದೆ.

*Mysore,*
*20th December, 1920*

**S. G. NARASIMHACHAR,**
*Kannada Translator.*

# ವಿಷಯ ಸೂಚಿಕೆ.



# PADYASARA

# ಪದ್ಯಸಾರ

## ಪಾರ್ವತಿಯ ಕೊರವಂಜಿ ಕಥೆ.

ಹಳ್ಳಿಗಳಲ್ಲಿಯೂ, ಚಿಕ್ಕ ಚಿಕ್ಕ ಊರುಗಳಲ್ಲಿಯೂ ಕಣಿಯನ್ನು ಹೇಳುವ ಹೆಂಗಸರು 'ಕೊರವಂಜಿ' ಎಂಬ ಹಾಡುಗಳನ್ನು ಹಾಡುತ್ತಾ ಬರುವುದುಂಟು. ಈ ಹಾಡುಗಳಲ್ಲಿ ಪ್ರಾಯಶಃ ಒಬ್ಬ ಪುರುಷನು ಸ್ತ್ರೀ ವೇಷವನ್ನು ಹಾಕಿಕೊಂಡು ತನ್ನ ಪ್ರಿಯೆಗೆ ಕಣಿ ಹೇಳುವ ನೆಪದಿಂದ ಅವಳ ಅನುರಾಗವನ್ನು ಸಂಪಾದಿಸುವ ಕಥೆಯು ಹೇಳಲ್ಪಡುತ್ತದೆ. 'ಅರ್ಜುನನ ಕೊರವಂಜಿ,' 'ಪಾರ್ವತಿಯ ಕೊರವಂಜಿ' ಮೊದಲಾದುವು ಈ ಜಾತಿಯ ಗ್ರಂಥಗಳು. ಈ ಗ್ರಂಥಕರ್ತರು ಇಂತಹವರೆಂದು ಇನ್ನೂ ಗೊತ್ತಾಗಿಲ್ಲ ; ಆದರೆ ಗ್ರಂಥದ ಶೈಲಿಯನ್ನೂ ಪ್ರಯೋಗದ ರೀತಿಯನ್ನೂ ನೋಡಿದರೆ, ಇವರು ಆಧುನಿಕ ಕವಿಗಳಾಗಿರಬಹುದೆಂದು ತೋರುತ್ತದೆ. ಮಾದರಿಗಾಗಿ ಇಲ್ಲಿ ಕೊಟ್ಟಿರುವ 'ಅಯೋಧ್ಯಾಪುರದ ವರ್ಣನೆಯು' ಪಾರ್ವತಿಯ ಕೊರವಂಜಿ ಕಥೆಯಿಂದ ತೆಗೆದುದು. ಇದು 'ದ್ವಿಪದಿ' ಎಂದರೆ ಎರಡೆರಡು ಚರಣವುಳ್ಳ ಪದ್ಯಗಳ ರೂಪವಾಗಿ ಬರೆದಿದೆ.

---

### ದ್ವಿಪದಿಗಳು.

### ೧. ಅಯೋಧ್ಯಾಪುರದ ವರ್ಣನೆ.

ಚಿನ್ನರನ್ನದ ಕೋಟೆ ಕೊತ್ತಳಗಳಿಂದ |
ಚೆನ್ನೆಸೆವ ಮುತ್ತುವಜ್ರದ ತೆನೆಗಳಿಂದ ||೧||

ಅಳವಟ್ಟ ಪವಳಗಳ ಬಾಗಿಲುಗಳಿಂದ |
ಥಳಥಳಿಪ ಮಾಣಿಕದ ಪ್ರೊಸಕನಗಳಿಂದ ||೨||

ಬಂಧುರದ ಚಂದ್ರಶಾಲೆಯ ಪಙ್ಕ್ತಿಯಿಂದ ।
ಚೆಂದದಂಗಡಿಮಳಿಗೆಗಳ ಸಾಲಿನಿಂದ ॥೩॥

ಮುಗಿಲುಗಳ ಮುಟ್ಟುತಿಹ ಡೆಂಕಣಿಗಳಿಂದ ।
ಮಿಗೆ ಮೆರೆವ ಕರಿತುರಗ ಶಾಲೆಗಳಿಂದ ॥೪॥

ಅತಿಚಿತ್ರವಾದ ಸಾಕೇತನಗರವನು ।
ಕ್ಷಿತಿನಾಥ ದಶರಥನು ಪೊರೆಯುತ್ತಲಿಹನು ॥೫॥

---

ದಾಸರ ಪದಗಳು:

## ಪುರಂದರದಾಸನ ಕೀರ್ತನೆಗಳು.

ಕ್ರಿಸ್ತಶಕ ೧೬ನೆಯ ಶತಮಾನದಲ್ಲಿ ಹೆಸರುಗೊಂಡಿದ್ದ ಕನ್ನಡ ಕವಿಗಳಲ್ಲಿ ಪುರಂದರದಾಸನೆಂಬಾತನು ಒಬ್ಬ ಕವಿಯು. ಈತನು ವೈಷ್ಣವಮತದವನಾದಕಾರಣ ವಿಷ್ಣುವನ್ನು ವಿಶೇಷವಾಗಿ ಕೊಂಡಾಡಿ ಕನ್ನಡದಲ್ಲಿ ಪದಗಳನ್ನು ಬರೆದಿದ್ದಾನೆ. ಇವುಗಳಿಗೆ 'ದಾಸರ ಪದಗಳು' ಎಂದು ಹೆಸರು. ಈ ವಿಧವಾದ ಪದಗಳನ್ನು ಬರೆದ ಕವಿಗಳಲ್ಲಿ ಕನಕದಾಸ, ಪುರಂದರದಾಸ, ವರಹತಿಮ್ಮಪ್ಪ, ಇವರೇ ಮುಖ್ಯರು. 'ತಾಳ, ಲಯ, ಇವುಗಳಿಗೆ ಅನುಗುಣವಾಗಿ ಹಾಡಬಹುದಾದ ಇವರ ಗ್ರಂಥಗಳು ಲಲಿತವಾಗಿಯೂ, ಭಕ್ತಿಜನಕವಾಗಿಯೂ, ಕಿವಿಗಿಂಪಾಗಿಯೂ ಇರುವುವು. ಪುರಂದರದಾಸನ ರಸಭರಿತವಾದ ಕೀರ್ತನೆಗಳಲ್ಲಿ ಜನಗಳಿಗೆ ಬಹಳವಾಗಿ ಅಭಿರುಚಿ. ಈತನು ಪಂಢರಾಪುರದಲ್ಲಿ ಜನಿಸಿ ಆ ಕಾಲದಲ್ಲಿ ಪ್ರಸಿದ್ಧಿಯುಳ್ಳಿದ್ದ ವಿಜಯನಗರ (ವಿದ್ಯಾನಗರ—ಆನೆಗೊಂದಿ ಸಂಸ್ಥಾನದ) ಅರಸನಾದ ಅಚ್ಯುತರಾಯನ ಆಳಿಕೆಯಲ್ಲಿ ಹೆಸರುಗೊಂಡಂತೆ ತಿಳಿಯಬರುತ್ತದೆ. ಈತನು ೧೫೬೪ರಲ್ಲಿ ಪರಂಧಾಮವನ್ನು ಹೊಂದಿದನು.

## ೨. ಮಾಡತಕ್ಕ ಕೆಲಸಗಳು.

ಹಸಿದು ಬಂದವರಿಗಶನವೀಯಬೇಕು!
ಶಿಶುಗಳಿಗೆ ಪಾಲ್ಬೆಣ್ಣೆಗಳ ನಡಿಸಬೇಕು ||೬||

ಮೋಸಗಾರರ ಕೂಡೆ ಬೆರಸದಿರಬೇಕು |
ಬಾಷೆಕೊಟ್ಟ ಬಳಿಕ್ಕ ನಿಜವಿರಲುಬೇಕು ||೭||

ಕಳ್ಳತನಮಾಡುತ್ತೊಡಲ ಹೊರೆಯಬೇಡ |
ಸುಳ್ಳಾಡಿ ಪಾತಕವನುಮಿಗೆ ಗಳಿಸಬೇಡ ||೮||

ಕುಳ್ಳಿರ್ದ ಸಭೆಯೊಳಗೆ ಕುತ್ಸಿತವ ಬೇಡ |
ಬಲ್ಲಿಯುವನಾನೆಂದು ಬಹುಹೆಮ್ಮೆ ಬೇಡ ||೯||

ಹಿರಿಯತನ ಬಂದಾಗ ಧಿಕ್ಕರಿಸಬೇಡ |
ಸಿರಿ ಬಂದ ಕಾಲಕ್ಕೆ ಬಲು ಮೆರೆಯಬೇಡ ||೧೦||

---

## ೩. ಹನುಮಂತನು ಚೂಡಕವನ್ನು ಶ್ರೀರಾಮನಿಗೆ ತಂದುಕೊಟ್ಟುದು

ತರಣಿವಂಶಜರಾಮನರಸಿ ಸೀತೆಯನು |
ದುರುಳ ರಾವಣನೊಯ್ಯೆ ಲೋಕಮಾತೆಯನು ||೧೧||

ರಾಮನಪ್ಪಣೆಯನ್ನು ಧರಿಸಿ ಶಿರದೊಳಗೆ |
ಭೂಮಿಜೆಯನರಸಲ್ಕೆ ಪೋಪ ಭರದೊಳಗೆ ||೧೨||

ಜಲಧಿಯನು ದಾಂಟಿ ಹನುಮಂತನೈತಂದು |
ಬಲುಗೈಯ ದಶಮುಖನ ಪೊಳಲಲ್ಲಿ ನಿಂದು ||೧೩||

ಜಲಜಮಿತ್ರನು ಕಡಲ ಸಾರ್ದ ಬಳಿಕಂದು |
ಪೊಳಲನೆಲ್ಲವ ಸುಳಿದು ಕಾಣದೆಯೆ ನೊಂದು ||೧೪||

ಸುಳಿವ ಕಾಣೆನು ಸೀತೆ ಯೆಲ್ಲಿಹಳೂ ಎನುತ |
ತಿಳುಹುವವರಾರೆಂದು ಮನದಿ ಚಿಂತಿಸುತ ||೧೫||

ಚೋರ ದಶಕಂಠನಿಹ ಪುರವನೆಳದೊಯ್ದು ।
ತೋರುವೆನು ರಾಘವಂಗೆನುತ ಕೈವೊಯ್ದು ॥೧೬॥

ಕೇರಿಕೇರಿಗಳಲ್ಲಿ ಶೋಧಿಸುತ ಬಂದು ।
ತೀರ್ಕೈದು ಶಿರವಣನ ಮನೆಗೆ ನಡೆತಂದು ॥೧೭॥

ಅಸುರನನುಜನು ಬಿಡುವ ಸುಯಿಲೊಳಗೆ ಸಿಕ್ಕಿ ।
ನುಸಿದು ಹಾರೆದೆಯಲ್ಲಿ ದೆಸೆಗೆ ಘುಮ್ಮಿಕ್ಕಿ ॥೧೮॥

ಕುಸುಮನಾಭನ ಭಕ್ತನುಸಿರೆ ಕೈಸಿಕ್ಕಿ ।
ಬಿಸಜಾಕ್ಷಿ ಜಾನಕಿಯ ಕುಶಲ ಮನವುಕ್ಕಿ ॥೧೯॥

ಧರಣಿಸುತೆ ಸೆರೆಯಿದ್ದ ವನದೆಡೆಗೆ ಸಾರಿ ।
ಪರಮಹರುಷದಿ ರಾಮಮುದ್ರಿಕೆಯ ತೋರಿ ॥೨೦॥

ಬಾಳುವೆಯದೊಳ್ಳಿತ್ತು ರಾಮಲಕ್ಷ್ಮಣರ ।
ವಾಲಿಯನುಜನು ನೆರಹಿ ಕಳುಹಿಸಿದ ಭಟರ ॥೨೧॥

ಪಾಳಯವದೆಲ್ಲವು ಶರನಿಧಿಯ ತಡಿಗೆ ।
ಮೇಳೈಸಿ ಬಂದಿಹುದು ಭರದಿ ನಿನ್ನಡಿಗೆ ॥೨೨॥

ರಾಯ ಕಳುಹಿದೆನನ್ನ ತಾಯೆ ನಿನ್ನೆಡೆಗೆ ।
ವಾಯುಸುತ ತಾನೆನುತ ಪೊಡೆಮಡುತಡಿಗೆ ॥೨೩॥

ಬಿನ್ನಹವ ಭಕುತಿಯಲಿ ಮಾಡಲದ ಕೇಳಿ ।
ಚೆನ್ನೆ ಜಾನಕಿ ಮನದಿ ಹರುಷವನು ತಾಳಿ ॥೨೪॥

ಚೂಡಕವ ಕೊಡಲು ಕೈಕೊಂಡು ನಡೆತಂದು ।
ನೋಡಿ ಸುತ್ತಣ ಬನವ ಮು**ಱಿ**ಯಬೇಕೆಂದು ॥೨೫॥

ಹಣ್ಣುಕಿತ್ತು ಹಿಣ್ಣುಕಿತ್ತು ಕೆಣಕಿ ಸುಳಿಯುತ್ತ ।
ಎಣಿಕೆಗೊಳ್ಳದೆ ಬನವ ಮುಱಿದು ಕೆಡಹುತ್ತ ॥೨೬॥

ಸೊಕ್ಕಿದಸುರನ ಕೂಡೆ ಸಿಕ್ಕಿ ಮಾತಾಡಿ ।
ರಕ್ಕಸರು ಪತ್ತಿಸಿದ ಬಾಲದುರಿನೋಡಿ ॥೨೭॥

ಅಕ್ಕಯಿಲ್ಲದೆ ಪುರಕೆ ಕಿಚ್ಚಿಕ್ಕಿ ಕಾಡಿ ।
ಗಕ್ಕನಲ್ಲಿಂದ ಧುಮ್ಮಿಕ್ಕಿ ತಾನೋಡಿ ॥೧೮॥

ಬಂದು ರಘುರಾಮನಿಗೆ ವಂದನೆಯ ಮಾಡಿ ।
ತಂದಿದ್ದ ಚೂಡಕವ ಹರುಷದೊಳು ನೀಡಿ ॥೧೯॥

ಇಂತು ಸೀತೆಯ ಸುದ್ದಿಯನು ತಾನೆ ತಂದು ।
ಸಂತಸವ ಬೀಱಿದನು ಸಕಲಜಗಕಂದು ॥೨೦॥

---

## ಸರ್ವಜ್ಞ ಪದಗಳು.

'ಸರ್ವಜ್ಞಮೂರ್ತಿ ವಚನಗಳು' ಅಥವಾ 'ಸರ್ವಜ್ಞಪದಗಳು' ಎಂಬ ಗ್ರಂಥವು ಕನ್ನಡಿಗರಲ್ಲಿ ಬಹಳ ಹೆಸರುಗೊಂಡಿರುವುದು. ಇದನ್ನು ಬರೆದ ಗ್ರಂಥಕರ್ತೃವಿಗೆ 'ಸರ್ವಜ್ಞ' ಎಂಬ ಬಿರುದಿನ ಹೆಸರು. ಪುಷ್ಪದತ್ತನೆಂಬುದೇ ಈತನ ನಿಜವಾದ ನಾಮಧೇಯವು. ಈತನು ಸುಮಾರು ಕ್ರಿಸ್ತಾಬ್ದ ೧೭೦೦ರಲ್ಲಿ ಜನಿಸಿದ್ದಂತೆ ತಿಳಿಯಬರುತ್ತದೆ. ಈತನ ತಂದೆಯಾದ ಬಸವರಸನೆಂಬ ಶೈವ ಬ್ರಾಹ್ಮಣನು ಯಾತ್ರಾರ್ಥವಾಗಿ ಕಾಶಿಗೆ ಹೋಗಿ, ಪುತ್ರಾರ್ಥಿಯಾದ ತಾನು ಅಲ್ಲಿ ದೇವರ ವರವನ್ನು ಪಡೆದು ಧಾರ್ವಾಡ ಜಿಲ್ಲೆಯಲ್ಲಿರುವ 'ಮಾಸೂರು' ಎಂಬ ತನ್ನ ಊರಿಗೆ ಹಿಂತಿರುಗಿ ಬರುತ್ತಿರುವಾಗ ದಾರಿಯಲ್ಲಿ ಸಿಕ್ಕಿದ ಅಂಬಲಾಪುರದಲ್ಲಿ ತನ್ನ ಪ್ರೀತಿಪಾತ್ರಳಾದ ಮಾಳವ ಹೆಂಗಸು ಒಬ್ಬಳಿಗೆ ಆ ಶಿವಪ್ರಸಾದವನ್ನು ಕೊಟ್ಟನು. ಆಕೆಯು ಗರ್ಭವನ್ನು ಧರಿಸಿ ಒಂದು ಗಂಡುಮಗುವನ್ನು ಹೆತ್ತಳು. ಇವನೇ ಪುಷ್ಪದತ್ತ (ಸರ್ವಜ್ಞ). ಈತನ ಪದಗಳು ಸುಮಾರು ಸಾವಿರಕ್ಕೆ ಮೇಲೆ ಸಿಕ್ಕುತ್ತವೆ. ಈತನು ಕೆಲವು ಒಗಟೆಗಳನ್ನೂ ಬರೆದಿದ್ದಾನೆ. ಅಂಥವುಗಳಲ್ಲಿ ಐದನ್ನು ಮಾದರಿಗಾಗಿ ಇಲ್ಲಿ ಕೊಟ್ಟಿದೆ.

ಈತನು ಮುಂದೆ ಆಗತಕ್ಕ ವಿಷಯಗಳನ್ನು ಸೂಚಿಸುವ ಕೆಲವು ಕಾಲಜ್ಞಾನ ವಚನಗಳನ್ನೂ ಬರೆದಿದ್ದಾನೆ. ಇವೆಲ್ಲ ಚೆನ್ನಬಸವಪುರಾಣದಲ್ಲಿ ಹೇಳಿರುವ 'ಕಾಲಜ್ಞಾನ ವಚನ'ದ ಆಧಾರದ ಮೇಲೆ ಬರೆದವು.

## ತ್ರಿಪದಿಗಳು.

### ೪. ಸರ್ವಜ್ಞಮೂರ್ತಿ ವಚನಗಳು.

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ? ಮತ್ತೆ ।
ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ ।
ಒಬ್ಬನೆ ದೈವ ಸರ್ವಜ್ಞ ॥೩೧॥

ಚಂದನವ ಕರಗಿಸಲು ಬೆಂದು ಪರಿಮಳವೆಕ್ಕು ।
ಸಂದಱಿವನಱಿದಾ ಸತ್ಪುರುಷರು ತಾವು ।
ನೊಂದು ಸೈರಿಪುದು ಸರ್ವಜ್ಞ ॥೩೨॥

ಆನೆ ನೀರಾಟದೊಳು ಮೀನ ಕಂಡಂಜುವುದೆ ।
ಹೀನಮಾನದವರ ಬಿರುನುಡಿಗೆ ತತ್ತ್ವದ ।
ಜ್ಞಾನಿಯಂಜುವನೆ ಸರ್ವಜ್ಞ ॥೩೩॥

ಹುತ್ತು ಹಾವಿಗೆ ಚೆಂದ ಮುತ್ತು ಕೊರಳಿಗೆ ಚೆಂದ ।
ಸತ್ತಿಗೆಯು ಚೆಂದವರಸಿಗೆ ಲೋಕಕ್ಕೆ ।
ಸತ್ಯವೇ ಚೆಂದ ಸರ್ವಜ್ಞ ॥೩೪॥

ಅನ್ನವನು ನೀಡುವುದು ಸನ್ನಯನೆ ನುಡಿಯುವುದು ।
ತನ್ನಂತೆ ಪರರ ಬಗೆದಡೆ ಕೈಲಾಸ ।
ಬಿನ್ನನೆಯಕ್ಕು ಸರ್ವಜ್ಞ ॥೩೫॥

ಉಣ್ಣ ದೊಡವೆಯ ಘಳಿಸಿ ಮಣ್ಣೊಳಗ ಬಚ್ಚಿಟ್ಟು ।
ಚೆನ್ನಾಗಿ ನೆಲವ ಸಾರಿಪನ ಬಾಯೊಳಗ ।
ಮಣ್ಣು ಕಾಣಯ್ಯ ಸರ್ವಜ್ಞ ॥೩೬॥

ಕೊಟ್ಟಿದ್ದು ತನಗ ಬಚ್ಚಿಟ್ಟಿದ್ದು ಪರರಿಂಗ ।
ಕೊಟ್ಟು ನಾ ಕೆಟ್ಟೆನೆನಬೇಡವದು ಮುಂದೆ ।
ಕಟ್ಟಿದಾ ಬುತ್ತಿ ಸರ್ವಜ್ಞ ॥೩೭॥

ಈಗ ಬಾ ಯಾಗ ಬಾ ಹೋಗಿ ಬಾಯೆನ್ನದೆ ।
ಆಗಲೇ ಕರೆದು ಕೊಡುವವನ ಧರ್ಮ ಹೊ ।
ನ್ನಾಗದೆ ಬಿಡದು ಸರ್ವಜ್ಞ ॥೩೮॥

ಉಣ್ಣಿ ಕೆಚ್ಚಿಲೊಳಿರ್ದು ವುಣ್ಣದದು ನೊರೆಹಾಲ ।
ಪುಣ್ಯವ ಮಾಡಿಯುಣಲೊಲ್ಲದವನಿರವು ।
ಉಣ್ಣಿಗೂ ಕಷ್ಟ ಸರ್ವಜ್ಞ ॥೩೯॥

ಆಡದೆ ಮಾಡುವನು ರೂಢಿಯೊಳಗುತ್ತಮನು ।
ಆಡಿ ಮಾಡುವನು ಮಧ್ಯಮನಧಮನು ತಾ ।
ನಾಡಿ ಮಾಡದವ ಸರ್ವಜ್ಞ ॥೪೦॥

ಬಲ್ಲವರು ಹಾವಸೆಯು ಕಲ್ಲ ತಾ ಮೆಟ್ಟುವರೆ ।
ಬಲ್ಲಿದರೊಡನೆ ಸೆಣಸಿದರೆ ಬಾಯೊಳಿಹ ।
ಹಲ್ಲು ಹೋದಂತೆ ಸರ್ವಜ್ಞ ॥೪೧॥

ಎದ್ದು ಮಾತಾಡದಿರು ಎದ್ದೆದ್ದು ನಿಲ್ಲದಿರು ।
ಇದ್ದ ಮನುಜರ ಜರೆಯದಿರು ಜಗದೊಳು ।
ಇದ್ದಾಗ ನೀನು ಸರ್ವಜ್ಞ ॥೪೨॥

ಮೂರ್ಖಂಗೆ ಬುದ್ಧಿಯನು ನೂರ್ಕಾಲ ಹೇಳಿದರೇಂ ।
ಗೋರ್ಕಲ್ಲ ಮೇಲೆ ಮಳೆಗರೆದರಾ ಕಲ್ಲು ।
ನೀರ್ಕುಡಿಯಲಹುದೆ ಸರ್ವಜ್ಞ ॥೪೩॥

ಸಾಲವನು ಕೊಂಬಾಗ ಹಾಲೋಗರುಂಡಂತೆ ।
ಸಾಲಿಗರು ಬಂದು ಎಳೆವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ ॥೪೪॥

ಬೇಡದಲೆ ಕೊಡುವ ತಾ ರೂಢಿಯೊಳಗುತ್ತಮನು ।
ಬೇಡಿದರೆ ಕೊಡುವ ಮಧ್ಯಮ ಕನಿಷ್ಠ ತಾ ।
ಬೇಡಿದರೂ ಕೊಡನು ಸರ್ವಜ್ಞ ॥೪೫॥

ಉತ್ತಮರೆಂಬುವರು ಸತ್ಯದಿಂ ಬಾಳುವರು
ಉತ್ತಮರನೇನೂ ಎನಬೇಡ ಜಗಕೆಲ್ಲ ।
ಮುತ್ತಿನಂತವರು ಸರ್ವಜ್ಞ ॥೪೬॥

ಡೊಂಕುಫಲದೊಳಗೆಲ್ಲ ಡೊಂಕು ಬಾಳೆಯಹಣ್ಣು ।
ಡೊಂಕಾದ್ದರೊಳಗೆ ರುಚಿಯುಂಟು ಸಜ್ಜನರು ।
ಇಂತಿರ್ಪರಯ್ಯಾ ಸರ್ವಜ್ಞ ॥೪೭

ಕೆಂಪು ಫಲದೊಳಗೆಲ್ಲ ಕೆಂಪು ಮುಕ್ರಯಹಣ್ಣು |
ಕೆಂಪುಂಟುವೊಳಗೇ ರುಚಿಯಿಲ್ಲ ದುರ್ಜನರು |
ಇಂತಿರ್ಪರಯ್ಯಾ ಸರ್ವಜ್ಞ ||೪೮||

ಬರೆ ಕಂಡು ಕರೆದವನ ಬರೆ ಕುಳ್ಳಿರೆನ್ನದವನ .
ಸರಸಜ್ಜನಿಕೆಯಿಲ್ಲದವನ ಸಖ್ಯವ |
ಬೆರಸಲೇ ಬೇಡ ಸರ್ವಜ್ಞ ||೪೯||

ಸತ್ಯವು ಹುಸಿದೊಡೆ ವೃತ್ತಿ ಹರಿವಡೆ ಶರಧಿ |
ಉತ್ತಮರು ತಪ್ಪಿ ನಡೆದರೆ ಲೋಕವಿ |
ನ್ನೆತ್ತ ಸೇರುವುದು ಸರ್ವಜ್ಞ ||೫೦||

ಬಳ್ಳಿದರುಪಸಿರ್ಪ ಕಳ್ಳ ನೊಳ್ಳಿದನಕ್ಕು |
ಬಳ್ಳಿದ ಕಳ್ಳನೊಡನಾಡೆಯುವ ಶುದ್ಧ |
ಕಳ್ಳನೇ ಅಕ್ಕು ಸರ್ವಜ್ಞ ||೫೧||

ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ |
ಅಲ್ಲದ್ದ ಸಹುದೆಂಬ ಅಜ್ಞಾನಿಯೊಡನಾಟ |
ಕಲ್ಲ ಹಾಯ್ದಂತೆ ಸರ್ವಜ್ಞ ||೫೨||

ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ |
ದುರ್ಜನರ ಕೂಡೆ ವೊಡನಾಟ ಬಚ್ಚಲಿನ |
ರೊಚ್ಚೆ ನಂತಿಹುದು ಸರ್ವಜ್ಞ ||೫೩||

ಮಾನಹೀನರ ಸಂಗವೇನು ಕೊಟ್ಟರು ಬೇಡ |
ಜ್ಞಾನವುಳ್ಳವರ ಸಂಗ ತಾ ಸಕ್ಕರೆ |
ಜೇನ ಸವಿದಂತೆ ಸರ್ವಜ್ಞ ||೫೪||

ಕೋಪವೆಂಬುದು ಕೇಳು ಪಾಪದ ನೆಲೆಗಟ್ಟು |
ಕೋಪದೊಳು ನೇಣು ಹರಿದಂತೆ ನರಕಕ್ಕೆ |
ಕೋಪ ತಾ ಸೆಳೆವ ಸರ್ವಜ್ಞ ||೫೫||

## ೫. ಒಗಟೆಗಳು.

ಕಾಲಿಲ್ಲದಲೆ ಹರಿಗು; ತೋಳಿಲ್ಲದಲೆ ಹೊಱುಗು |
ನಾಲಿಗಿಲ್ಲದಲೆ ಯುಲಿವುದು ಕವಿಕುಲದ |
ಮೇಲುಗಳ ಪೇಳ ಸರ್ವಜ್ಞ (ಹೊಳೆ) ||೫೬||

ಹಲ್ಲು ನಾಲಗೆಯಿಲ್ಲ ಸೊಲ್ಲು ಸೋಜಿಗವಲ್ಲ |
ಕೊಲ್ಲದೆ ಮೃಗವ ಹಿಡಿವುದು ಲೋಕದೊಳ
ಗೆಲ್ಲಿತಾಪಿನಲಿ ಸರ್ವಜ್ಞ (ಬಲೆ) ||೫೭||

ಅರೆಯ ಕಲ್ಲಿನ ಮೇಲೆ ಮರ ಮೂಡಿದುದ ಕಂಡೆ |
ಮರದ ಮೇಲೆರಡು ಕೈ ಕಂಡೆ ಚೆನ್ನಾಗಿ |
ಇರುವುದ ಕಂಡೆ ಸರ್ವಜ್ಞ (ಗಂಧದ ಕಲ್ಲು) ||೫೮||

ಇಱುವರೆಯು ಪಱಿಲ್ಲ ಹಱಿವರೆಯು ಸೀಳಿಲ್ಲ |
ತಿಱಿಗೂಟಿ ಕೊಂಡ ಋಣವಿಲ್ಲ ಕಪಿಗಳ |
ಅಱಿದರಿದು ಹೇಳ ಸರ್ವಜ್ಞ (ಜಿಂಕಿ) ||೫೫||

ಹತ್ತು ಸಾವಿರ ಕಣ್ಣು ನೆತ್ತಿಲಾದರು ಬಾಲ |
ಮುತ್ತಿನಾ ಮೃಗವ ಹಿಡಿವುದು ಕವಿಜನರ |
ಕುತ್ತಪಿದ ಹೇಳ ಸರ್ವಜ್ಞ (ನವಿಲು) ||೬೦||

---

### ಆ. ಪದಗಳು.

## ೬. ದಾಸರ ಪದಗಳು.

* ಪುರಂದರ ದಾಸರು.

ಕಟ್ಟಿ ಬುತ್ತಿಯನು ಮುಟ್ಟಿ ಬಿಡದು ತರಬಹುದು |
ಅಟ್ಟಿಬಿಡು ಮದಕರಿಯ ಕಟ್ಟಿ ತರಬಹುದು |
ದುಷ್ಟ ಸರ್ಪನ ಮುತ್ತ ಕಲಕಿ ಬರಬಹುದು |
ದುಷ್ಟಾತ್ಮರಾದವರ ಬಿಟ್ಟು ಕಳ ಮನವೇ ||೬೧||

* (ಈ ಗ್ರಂಥಕರ್ತೃಗಳ ಚರಿತ್ರೆಯನ್ನು ೨ನೆಯ ಪುಟದಲ್ಲಿ ನೋಡಿರಿ.)

ಚೇಳು ಕುಟುಕಿದ ನೋವ ತಾಳಿಕೊಳಲಹುದು ।
ಕಾಲಮೇಘದ ಸಿಡಿಲ ಸೈರಿಸಲು ಬಹುದು ।
ಶೂಲಪಾಣಿಯ ಫಣೆಯ ಕಣ್ಣ ಕಿಚಿಲಹುದು ।
ಕಾಳುಮೂಳರ ಸಂಗ ಮೆಱೆಗು ಕಳ ಮನವೇ ॥೬೨॥

ಹಱಿವ ಗರಗಸವಲ್ಲಿ ಶಿರವನಿಡಬಹುದು ।
ಬೆರಸಿಬಹ ಕಾಳ್ಕಿಚ್ಚ ತರಹರಿಸಬಹುದು ।
ಸರಿಸದಲಿ ನಿಂತು ಸಿಂಹವ ಕೆಣಕಬಹುದು ।
ಮೆಱಸಿ ಕೊರಳನು ಕೊಯ್ವ ನರರ ಮೆಱೆ ಮನವೇ ॥೬೩॥

ಒಂದು ಜಾತಿಗೆ ವಿಷವು ಪುಚ್ಛದೊಳಗಿಹುದು ।
ಒಂದು ಜಾತಿಗೆ ದಂತದೊಳಗೆ ವಿಷವಿಹುದು ।
ಒಂದು ಜಾತಿಗೆ ದೇಹದೊಳಗೆಲ್ಲ ವಿಷವು ।
ಹಿಂತೆಯಾಡುವ ನುಡಿಯು ಘೋರವಿಷ ಮನವೆ ॥೬೪॥

## ೬. ಪ್ರಯೋಜನವಿಲ್ಲದ ಕಾರ್ಯಗಳು.

ಜಂಬಲಿಯನುಂಬ ಸಂಗವ್ರತಾನ್ನವೇಕೆ ।
ಕಂಬಳಿಯ ಹೊದೆವವಗೆ ಮಡಿವರ್ಗವೇಕೆ ।
ಡಂಭವುಳ್ಳಾತನಿಗೆ ಗಾಂಭೀರ್ಯವೇಕೆ ।
ಹಂಬಲಿಸುವವನ ಜೀವನವು ತಾನೇಕೆ ॥೬೫॥

ಮೋಸದಲಿ ಕೊಲುವವಗೆ ಧರ್ಮ ತಾನೇಕೆ ।
ಭಾಷೆತಪ್ಪುವ ನರಗೆ ನಂಬುಗೆಯದೇಕೆ ।
ಕ್ಲೇಶವೊಡಲೊಳಗಿರಲು ಯಾತ್ರೆಗಳದೇಕೆ ।
ಆಶೆ ಬಿಡದವಗೆ ಸನ್ಯಾಸವೇಕೆ ॥೬೬॥

ಕಾಡಿನಲಿ ತಿರುಗುವಗೆ ಭೂಷಣವದೇಕೆ ।
ಓಡಿನೊಳಗುಂಬವಗೆ ಹರಿವಾಣವೇಕೆ ।
ಬೇಡಿದರ ಕೊಡದ ಲೋಭಿಗೆ ಬಿಂಕವೇಕೆ ।
ಬೇಡಿ ತಿನ್ನುವ ನರಗೆ ಮೋಜು ತಾನೇಕೆ ॥೬೭॥

## ೮. ದುರ್ನೀತಿಯೇ ಹೊಲೆತನ.

ಶೀಲವನು ಕೈಕೊಂಡು ನಡೆಸವವ ಹೊಲೆಯ।
ಹೇಳಿದಾ ಸತ್ಕಥೆಯ ಕೇಳದವ ಹೊಲೆಯ।
ಆಳಾಗಿ ದಣಿಗೆರಡ ಬಗೆವಾತ ಹೊಲೆಯ।
ಕೀಳುಮಾತಾಡುವವ ಬಲುಕಟ್ಟ ಹೊಲೆಯ ॥೬೮॥

ಕೊಂಡ ಸಾಲವ ಹರಿಸದಾತನೇ ಹೊಲೆಯ।
ಲಂಡತನದಲಿ ನಡೆವ ನರ ಭಂಡಹೊಲೆಯ।
ಉಂಡ ಮನೆಗೆರಡ ಬಗೆವಾತನೇ ಹೊಲೆಯ।
ಹೆಂಡತಿಗೆ ಹೆದರುವವ ಕಡುಹೇತಿ ಹೊಲೆಯ ॥೬೯॥

ಇದ್ದಾಗ ದಾನವನು ಮಾಡದವ ಹೊಲೆಯ।
ಮುದ್ದಿಕ್ಕಿ ಕೊಲ್ಲುವಾತನೆ ಮಾರಿಹೊಲೆಯ।
ಬದ್ಧವಹ ನಯದ ನುಡಿಯಿಲ್ಲದವ ಹೊಲೆಯ।
ಶುದ್ಧ ತಾನೆಂಬಾತನೇ ಶುಣ್ಠ ಹೊಲೆಯ ॥೭೦॥

ಆಸೆಮಾತನು ಕೊಟ್ಟು ತಪ್ಪುವವ ಹೊಲೆಯ॥
ಲೇಸನುಪಕಾರವನು ಮಾಡದವ ಹೊಲೆಯ॥
ಮೋಸವಲಿ ಮುನಿದು ಕೆಡಿಪಾತನೇ ಹೊಲೆಯ।
ಹುಸಿಯ ಬಗುಳುವ ಹೀನನವ ದುಷ್ಟ ಹೊಲೆಯ। ॥೭೧॥

---

## ೯. ಮೂರ್ಖರು.

ಬಂಟಿಯಲಿ ಹೆಂಡತಿಯ ಬಿಡುವಾತ ಮೂರ್ಖ।
ನಂಟರಿಗೆ ಸಾಲವನು ಕೊಡುವಾತ ಮೂರ್ಖ।
ಗಂಟನೊಬ್ಬರ ಕೈಯಲಿಡುವಾತ ಮೂರ್ಖ।
ತುಂಟನಾದವನು ತಾ ಕಡುಮೂರ್ಖನಯ್ಯ ॥೭೨॥

ಪಡೆದ ಮಗಳನು ಹಣಕೆ ಮಾರುವವ ಮೂರ್ಖ।
ಮಡದಿ ಹುಟ್ಟಿದ ಮನೆಯೊಳಿರುವಾತ ಮೂರ್ಖ।
ಬಡತನವು ಬಂದಾಗ ಮರುಗುವವ ಮೂರ್ಖ।
ಪೃಥಬುದ್ಧಿಯಿಲ್ಲದವ ಕಡುಮೂರ್ಖನಯ್ಯ ॥೭೩॥

ಸತ್ತಕರುವಿನ ತಾಯ ಕರೆವಾತ ಮೂರ್ಖ ।
ಒತ್ತೆಯಿಲ್ಲದೆ ಸಾಲ ಕೊಡುವಾತ ಮೂರ್ಖ ।
ಹತ್ತೆಂಟು ಬಗೆಯಲ್ಲಿ ಹಲುಬುವವ ಮೂರ್ಖ ।
ಹೆತ್ತತಾಯ್ಬೈವವನು ಕಡುಮೂರ್ಖನಯ್ಯ ॥೨೪॥

ಸ್ವಾಮಿನಾಮವ ಬಿಡದೆ ಭಜಿಸದವ ಮೂರ್ಖ ।
ಹೇಮವನು ಗಳಿಸಿಯುಣ್ಣದಾತನೇ ಮೂರ್ಖ ।
ನೇಮದಲಿ ಹಿರಿಯರಿಗೆ ನಮಿಸದವ ಮೂರ್ಖ ।
ತಾಮಸರ ಕೂಡುವವ ಕಡುಮೂರ್ಖನಯ್ಯ ॥೨೫॥

---

## ಮಹಾನವಮಿಯ ಪದಗಳು.

ಪ್ರತಿ ವರ್ಷದಲ್ಲಿಯೂ ನವರಾತ್ರಿಯ ಹಬ್ಬದಲ್ಲಿ ಹಳ್ಳಿಯ ಮಠದ ವಿದ್ಯಾರ್ಥಿಗಳು ಬಿಳಿಯ ಉಡುಪನ್ನೂ ಪಾಜಾಮೆಯನ್ನೂ ಅಂಗಿ ರುಮಾಲುಗಳನ್ನೂ ಹಾಕಿಕೊಂಡು, ತಂತಮ್ಮ ಉಪಾಧ್ಯಾಯರ ಮುಂಗಡೆ ಸಾಲುಸಾಲಾಗಿ ಹೋಗುತ್ತಾ ದೊಡ್ಡದೊಡ್ಡವರ ಮನೆಗಳಲ್ಲಿಯೂ ಹುಡುಗರ ತಂದೆ ತಾಯಿಗಳ ಮನೆಗಳಲ್ಲಿಯೂ ಚೌಪದಿ ಪದ್ಯಗಳನ್ನು ಹೇಳುವದಷ್ಟೆ, ಈ ಉಪಾಧ್ಯಾಯರು ಯಕ್ಷಗಾನದಲ್ಲಿ ಬರೆದ ಲವಕುಶರ ಕಾಳಗ, ಬಭ್ರುವಾಹನ ಕಾಳಗ ಮುಂತಾದ ಆಟಗಳನ್ನು ಈ ಹುಡುಗರ ಮೂಲಕ ಅಭ್ಯಾಸಮಾಡಿಸಿ ಆಡಿಸುವುದೂ ಉಂಟು. ಈ ಹಬ್ಬದಲ್ಲಿ ವಿಶೇಷವಾಗಿ ಹಾಡಿಸುವ ಪದಗಳು ಕೆಲವು ರೂಢಿಯಲ್ಲಿವೆ. ಈ ಪದಗಳಿಗೆ "ಮಹಾನವಮಿಯ ಪದ" ಗಳೆಂದು ಹೆಸರು. ಇವು "ಚೌಪದಿಯಲ್ಲಿ" ಎಂದರೆ ನಾಲ್ಕು ಚರಣಗಳುಳ್ಳ ಪದ್ಯಗಳಾಗಿ ಬರೆದಿವೆ. ಇವುಗಳಲ್ಲಿ ಕೆಲವನ್ನು ಇಲ್ಲಿ ಮಾದರಿಗಾಗಿ ಮುಂದೆ ಕೊಟ್ಟಿದೆ.

### ೧೦. ಮಹಾನವಮಿಯ ಪದಗಳು.

ಆಶ್ವಯುಜಶುದ್ಧ ಮಾನವಮಿ ಬರಲೆಂದು ।
ಶಾಶ್ವತದಿ ಹರಸಿದೆವು ಬಾಲಕರು ಬಂದು ।
ಈಶ ನಿಮಗತ್ಯಧಿಕ ಸುಖವ ಕೊಡಲೆಂದು ।
ಲೇಸಾಗಿ ಹರಸಿದೆವು ಬಾಲಕರು ಬಂದು ॥೨೬॥

ಧನಕನಕವಸ್ತುವಾಹನವಾಗಲೆಂದು ।
ಕನಕದಂಡಿಗೆ ಚೌರಿ ನಿಮಗಾಗಲೆಂದು ।
ದಿನದಿನಕೆ ರಾಜಮನ್ನಣೆ ಹೆಚ್ಚಲೆಂದು ।
ಅನುದಿನವು ಹರಸಿದೆವು ಬಾಲಕರು ಬಂದು ||೨೭||

ಛತ್ರಚಾಮರತೇಜಿ ನಿಮಗಾಗಲೆಂದು ।
ಅರ್ಥಿಯಿಂ ಮಾಲಕುಮಿ ನಿಮಗೊಲಿಯಲೆಂದು ॥
ಪುತ್ರಪೌತ್ರರು ನಿಮಗೆ ಹೆಚ್ಚುತಿರಲೆಂದು
ಅರ್ಥಿಯಿಂ ಹರಸಿದೆವು ಬಾಲಕರು ಬಂದು ||೨೮||

ಮಳೆ ಬಂದು ಬೆಳೆಬೆಳೆದು ಧರೆ ತಣಿಯಲೆಂದು ।
ತಿಳಿಗೊಳಗಳುಕ್ಕಿ ತುಱುಗಳು ಕಱೆಯಲೆಂದು ॥
ನಳಿನಮುಖಿಯರು ಸುಪುತ್ರರ ಪಡೆಯಲೆಂದು ।
ಇಳೆಯೊಳಗೆ ಹರಸಿದೆವು ಬಾಲಕರು ಬಂದು ||೨೯||

ಆಯುರಾರೋಗ್ಯಗಳು ನಿಮಗಾಗಲೆಂದು ।
ಶ್ರೇಯಸ್ಸು ಸಂಪತ್ತು ಹೆಚ್ಚುತಿರಲೆಂದು ॥
ಆಮತದಿ ಜಗದೊಡೆಯನೊಲವಾಗಲೆಂದು ।
ಪ್ರೀಯದಿಂ ಹರಸಿದೆವು ಬಾಲಕರು ಬಂದು ||೩೦||

ಹರಕೆಯನು ಕೇಳಿ ಹರುಷವ ಮಾಡಿ ನಮಗೆ ।
ತರಿಸಿಕೊಡಿ ಪಚ್ಚಡವ ನಮ್ಮಯ್ಯಗಳಿಗೆ ॥
ಬೆರಸಿಕೊಡಿ ಕಡಲೆಯನು ಬೆಲ್ಲವನು ನಮಗೆ ।
ಸರಸತಿಯ ಕರುಣವುಂಟಾಗಿರಲಿ ನಿಮಗೆ ||೩೧||

ಅಟಿಯಪಡುಗೊಱೆಯಲ್ಲ ಮುನಿದು ಕೇಳುವರೆ ।
ಬಟಿಯ ಸಂಬಳವಲ್ಲ ನಿಂತು ಕೇಳುವರೆ ।
ಹಡೆಸಾಲವಲ್ಲ ಹಗಲಿರುಳು ಕಾಡುವರೆ ।
ಅಟಿಮನವ ಮಾಡದಿರಿ ಕೀರ್ತಿಗಳಿಸುವರೆ ||೩೨||

ಹಂದುನಾಗಳೆಂಬ ಸಂದೇಹ ಬೇಡಿ ।
ಬಂದ ಬವಣೆಗೆ ಕೊಡುವುದುಚಿತಗಳ ನೀಡಿ ॥
ಹಿಂದುಳಿದ ಕಡಬಡ್ಡಿಯಲ್ಲ ನಮಗೀಗ ।
ಮುಂದಾಗಿ ಪಚ್ಚಡವ ತರಿಸಿಕೊಡಿ ಬೇಗ ||೩೩||

ಕೊಟ್ಟರಿಸಿ ಕೇಳ ಬಂದವರಲ್ಲ ನಾವು।
ಬಿಟ್ಟ ಬೀಡಾರ ತೆಗೆ ಯೆನ್ನದಿರಿ ನೀವು॥
ಕಷ್ಟಲೋಭಿಯ ಬಳಿಗೆ ಬರಲಿಲ್ಲನಾವು।
ಕೊಟ್ಟ ನಮಗುಡುಗೊಱೆಯ ಕಳುಹಿಕೊಡಿ ನೀವು ॥೧೪॥

ಕೊಡದ ಲೋಭಿಯನು ಕೊಂಡಾಡಿ ಫಲವೇನು।
ದೃಢವಿಲ್ಲದವರುಗಳ ಬೇಡಿ ಫಲವೇನು॥
ಜಡದೇಹಿಗಳಿಗೆ ಜಯವೆಂದು ಫಲವೇನು।
ಕೊಡದ ಲೋಭಿಯ ಗಂಡ ಕಲಿಕರ್ಣ ನೀನು ॥೧೫॥

---

## ಪರದಾರಸೋದರ ರಾಮನಾಥನ ಚರಿತ್ರೆ.

ಹದಿನೇಳನೆಯ ಶತಮಾನದಲ್ಲಿ ನಂಜುಂಡ ಕವಿಯೆಂಬ ಗ್ರನ್ಥಕರ್ತೃವು 'ಪರದಾರಸೋದರ ರಾಮನಾಥನ ಚರಿತೆ' ವನ್ನು ಬರೆದನು. ವಿಜಯನಗರದ ಹತ್ತಿರ ಹೆಸರುಗೊಂಡಿದ್ದ 'ಹೊಸದುರ್ಗ' ಎಂಬ ಊರಿನಲ್ಲಿ ವಾಸವಾಗಿದ್ದ ಕಂಪಿಲರಾಯನ ಮಗನಾದ ಕುಮಾರರಾಮನೇ ಈ ಗ್ರನ್ಥಕ್ಕೆ ಕಥಾನಾಯಕ. ಸುಚರಿತ್ರನಾಗಿಯೂ ಗುಣನಿಧಿಯಾಗಿಯೂ ಇದ್ದ ಈತನು ದಕ್ಷಿಣದೇಶದಲ್ಲಿ ಪ್ರಸಿದ್ಧವಾಗಿದ್ದ ಓರಗಲ್ಲು ರಾಜಧಾನಿಯಲ್ಲಿ ಆಗ ಆಳುತ್ತಿದ್ದ ಪ್ರತಾಪರುದ್ರದೇವನ ಪಡೆಯಲ್ಲಿ ಸೈನ್ಯಾಧಿಕಾರಿಯಾಗಿದ್ದುಕೊಂಡು. ದೊರೆಯ ಪ್ರೀತಿಗೆ ಪಾತ್ರನಾಗಿ ರಾಜ್ಯವನ್ನು ನಾಲ್ಕು ಕಡೆಯಲ್ಲಿಯೂ ಹೆಚ್ಚಿಸುತ್ತಿದ್ದನು. ಈತನ ಆಶ್ರಯವನ್ನು ನಂಜುಂಡಕವಿಯು ಹೊಂದಿ ಅವನ ಯಶಸ್ಸನ್ನು ಈ ಗ್ರನ್ಥದಲ್ಲಿ ಕೊಂಡಾಡಿರುವನು. ಈ ಗ್ರನ್ಥವು ತೆನುಗು ಭಾಷೆಯಲ್ಲಿ 'ರಾಮನಾಥಕಥೆ' ಎಂಬ ಹೆಸರಿನಿಂದ ಪ್ರಚಾರದಲ್ಲಿದೆ. ಈ ಗ್ರನ್ಥವು 'ಸಾಂಗತ್ಯ' ರೂಪವಾಗಿ ಬರೆದಿದೆ. ಹೆಂಗಸರು ಹೇಳುವ ಹಾಡುಗಳು ಪ್ರಾಯಶಃ ಈ ಜಾತಿಯವುಗಳಾಗಿವೆ. ಇದರ ಎರಡನೆಯ ಸಂಧಿಯಲ್ಲಿ ಬರುವ ಕರ್ಣಾಟಕದೇಶ ವರ್ಣನೆಯನ್ನು ಇಲ್ಲಿ ಮಾದಿರಿಗಾಗಿ ಕೊಟ್ಟಿದೆ.

---

## ಸಾಂಗತ್ಯ.

### ೧೧. ಕರ್ಣಾಟದೇಶ ವರ್ಣನೆ.

ಆ ಮೇರುಗಿರಿಯ ದಕ್ಷಿಣಭಾಗದೊಳಖಿ॥ ರಾವನಿತೆವಡೆದೆಸೆದಿರ್ಪ |
ಭೂಮಿಗಳೆಡೆಯೊಳಿರ್ಪುದು ಕರ್ಣಾಟವೆಂ।ಹೀವಣ್ಣಾಲಿಗಾಡಿವೆತ್ತು॥೧೬॥
ಕಾವೇರಿಯಿಂದ ಗೋದಾವರಿವರೆಗವಿ। ರ್ದಾವಸುಧಾತಳವಳಯ |
ಭಾವಿಸೆ ಕರ್ಣಾಟಕಜನಪದವದ । ನಾವನೊಲಿದು ಬಣ್ಣಿಸುವನು ॥೧೭॥
ಗ್ರಾಮ ನಗರ ಖೇಡ ಖರ್ವಡ ದುರ್ಗ ದ್ರೋ। ಣಾಮುಖಸಂದೋಹದಿಂದ
ಕಾಮನ ಡುಂಬೊಲದಂತೆ ಕರ್ಣಾಟಕ । ಭೂಮಿ ಕಣ್ಗೆಸೆದಿರುತಿಹುದು॥
ಭೂರಮೆಯುಟ್ಟಿಲ್ಲದಿಟ್ಟ ದುಕೂಲದ॥ ಸೀರೆಗಳಂತೆ ಕಣ್ಗೊಳಿಪ ॥
ಭೂರಿನದಿಗಳಾಕರ್ಣಾಟಭೂಮಿಯೊ । ಳೋರಂತೆ ಪರಿದೆಸೆದಿಹುದು ॥
ಶರಧಿಯನೊಲಿದವರ್ದಪ್ಪಲಾ ತೊರೆವೆಣ್ಗ । ಳಿಂದೆ ನೀಡಿದ ಕೈಗಳನಲು ॥
ಕರವೆಸೆದಿರ್ಪುವು ಪರಿಕಾಲ್ಗಳ ನಾಡ । ಸಿರಿಯನದೇನಬಣ್ಣಿಪೆನು ॥
ಸುರಗಿ ಸಂಪಗೆ ಸುರಹೊನ್ನೆಗಳಲರ್ಪುಡಿ । ವರಸಿ ನಲವಿನಿಂದ ಪರಿವ ॥
ಪರಿಕಾಲ್ಗಳಾಪೊನಲಲ್ಲಿ ಕುಂಕುಮರಸ । ದಿರವಿನಂತಿಹುದು ನೋಳ್ಪರಿಗೆ॥
ನಂದನದಂತೆ ನೋಳ್ಪರ ಕಣ್ಗಳಿಗಾ । ನಂದವನಿರದೆ ಪುಟ್ಟಿಸುವ ॥
ಕುಂದದ ಫಲತತಿಯಿಂದ ಮೆಱೆವ ವನ । ವೃಂದದಿಂದೆಸೆವುದಾಭೂಮಿ ॥
ನಾರಿಕೇಳಾಮ್ರಪನಸ ಕದಳಿ ಖ । ರ್ಜೂರ ಚಂಪಕ ಚಂಪನಗಳ ॥
ಆರಾಮದಿಂದ ರಂಜಿಸುತಿರ್ಪುದದು ಕಣ್ಗೆ । ಪಾರಣೆಯನು ಪಾಂಥಜನದ ॥
ದೇವನದೀಮಾತೃ ಕೋರ್ವ್ವರೆಯಿಂದದು । ದೇವಲೋಕವನೇಳಿಸುತ ॥
ಭೂವನಿತೆಯ ಧಾನ್ಯವಕ್ಷಯನಿಧಿಯಂ । ತಾವಗಮೆಸೆದಿರುತಿಹುದು ॥
ಅಳಿಯಿಲ್ಲದಂಬುಜಮಂಬುಜವಿಲ್ಲದ । ಕೊಳ ಕೊಳನಿಲ್ಲದಾರಾಮ ॥
ವಿಳಸಿತಾರಾಮವಿಲ್ಲದ ಕಾಲೂರ್ಗಳಿ । ಳ್ಳಿಳೆಯೊಳಲ್ಲಿ ನೋಡಿದರೂ ॥
ಪಲ್ಲವವಿಲ್ಲದ ಮಾವು ಮಾವಿಲ್ಲದ । ಮಲ್ಲಿಗೆ ಮಲ್ಲಿಕಾಂತಿಕೆ ॥
ಇಲ್ಲದ ವನ ವನವಿಲ್ಲದ ಭೋಗಿಗ । ಳಿಲ್ಲಾದೇಶದೆಡೆಯೊಳು ॥೯೬॥
ನಡೆವಕ್ಕಿನುಡಿವಕ್ಕಿ ಪೊಳೆವಕ್ಕಿ ಪೊಣರ್ವಕ್ಕಿ । ಪಡಿಯುರವಕ್ಕಿಕೇಳಿಸುವ ॥
ಗೆಡೆವಕ್ಕಿ ಗರಿಗಣ್ವಕ್ಕಿಗಳಾನೆಲ। ದೆಡೆಯ ಬನದೊಳಿರುತಿಹುದು ॥೯೭॥

ಅಲರ್ದಂಬುಜಪುಳ್ಳಲರ್ದ ಚೆನ್ನೆಯ್ದಿಲ | ಕೊಳಗಳ ಶಾಲಿವನಗಳಾ ||
ನೆಲೆವನೆಯಾಗಿಹುದೆಲ್ಲಿ ನೋಡಿದೊಡಾ | ನೆನವದನೇನ ಬಣ್ಣಿಪೆನು ||೯೮||
ನಡೆವಂಚೆ ನುಡಿವರಗಿಳಿ ನಲಿದಾಡುವ | ಜೆಡಗಿನ ನವಿಲು ಕೂಗಿಡುವ ||
ಪಡಿಯರವಕ್ಕಿ ಮೊರೆವ ಪರಮೆಗಳದೆ | ಗೆಡಿಪುವು ಪಥಿಕರನಲ್ಲಿ ||೯೯||
ಕಡಲುಗಳಾ ನಾಡ ಸಿರಿಯ ಸೊಬಗನೆಡೆ || ಬಿಡದ್ಯೈತಂದುಪೆಂಬಂತೆ ||
ಕಡೆಗೋಡಿಗಳಿಂದ ಮೆಱೆವ ಬಳ್ಗೆ ಱೆಗಳಾ| ಪೊಡಪಿಯೊಳ ಪೆದಿರುತಿಹುವು ||
ಅಗೆವೊಯ್ವ ಕಳಗೀಳ್ವ ಬೆದೆಯ ಬಿಕ್ಕುವ ನೀರ | ಬಗೆಯುಱಿದೂಡುವ [ಸಸಿಯ ||
ತೆಗೆವ ನಡುವೆ ನಗೆಮೊಗದ ಪಾಮರಿಯರ | ಬಗೆ ಜೆಡಗಾಗಿಹುವಲ್ಲಿ ||
ಕಟ್ಟಿಂಬ ನುಡಿ ಮುದಿಯೊಳಗಾಟಪದ| ಬಟ್ಟೆಯೊಳಾಲ್ಲಿ ಯೆಡೆಯೊಳು||
ಪುಟ್ಟುಹುವಲ್ಲದೆ ನಾಡೊಳದನು ಬಾಯ | ಬಿಟ್ಟು ನುಡಿವರಲ್ಲಿಲ್ಲ ||೧೦೧||
ತೋರದುಱುಬು ತೊಂಡೆವಾಯ್ದೆ ಱೆಮುಗುಳ್ನಗೆ | ಮೀರೆಯಱಿದ [ಮೆಲ್ವಾತು ||
ಓರೆವೋಗದ ಜಾಣ್ಮೆ ಮೆರೆಯಲ್ಲಿಯ ಪೆಂಡಿ | ರೋರಂತೆಕಣ್ಸೆದಿಹರು||
ವೀರರಲ್ಲದೆ ಹಂದೆಗಳು ವಿತರಣಗುಣ | ಶೂರರಲ್ಲದೆ ಲೋಭಿಗಳು ||
ಸಾರಗುಣಗ್ರಾಹಿ ರಸಿಕರಲ್ಲದೆ ದುರ್ವಿ | ಕಾರಿಗಳಿಲ್ಲಾನೆಲದೊಳು ||೧೦೨||
ಆಡುವರಿಲ್ಲನೃತವನಾಜೆರಂಗದೊ | ಳಾಡುವರಿಲ್ಲೆ ಱೆಮುದನು ||
ಕೂಡೆ ಕೊಡದರಿಲ್ಲಾನಾಡ ಮನುಜರ | ಗಾಡಿಯನೇನ ಬಣ್ಣಿಪೆನು ||

---

## ಕುಮುದೇಂದು ರಾಮಾಯಣ.

ಬಹು ಪವಿತ್ರವಾದ ರಾಮಚರಿತವನ್ನು ಕೊಂಡಾಡುವ ಗ್ರಂಥಗಳು ಅನೇಕ ಭಾಷೆಗಳಲ್ಲಿವೆಯಷ್ಟೆ. ಇವೆಲ್ಲಕ್ಕೂ ವಾಲ್ಮೀಕಿ ಮಹರ್ಷಿಯಿಂದ ರಚಿತವಾದ ವಾಲ್ಮೀಕಿ ರಾಮಾಯಣವೇ ಮುಖ್ಯಾಧಾರವೆಂದು ಅನೇಕರು ಒಪ್ಪುವರು. ಆದರ ಜೈನಗ್ರಂಥಕರ್ತೃಗಳು ಈ ಮಾತನ್ನು ಅಷ್ಟು ಅಂಗೀಕರಿಸುವುದಿಲ್ಲ. ಇವರ ಗ್ರನ್ಥಗಳು ಪ್ರಾಕೃತ,

ತಮಿಳು, ಕನ್ನಡ ಮುಂತಾದ ಅನೇಕ ಭಾಷೆಗಳಲ್ಲಿ ಬರೆಯಲ್ಪಟ್ಟಿವೆ, ಕನ್ನಡ ಭಾಷೆಯಲ್ಲಿ ಜೈನಕವಿಗಳಿಂದ ವಿರಚಿಸಲ್ಪಟ್ಟ ಪಂಪರಾಮಾಯಣ, ಕುಮುದೇಂದುರಾಮಾಯಣ, ಇವು ಪ್ರಸಿದ್ಧವಾದ ರಾಮಚರಿತಗಳು, ಇವುಗಳಲ್ಲಿ ರಾಮ ಲಕ್ಷ್ಮಣ ಮುಂತಾದವರು ಜೈನರೆಂದೂ, ಅವರು ಜಿನಧರ್ಮಗಳನ್ನು ಬಹು ಚೆನ್ನಾಗಿ ಅನುಸರಿಸಿ ಅವನ್ನು ಪ್ರಸಿದ್ಧಿಪಡಿಸಿ ಯಶೋವಂತರಾದರೆಂದೂ ಹೇಳಿರುವುದು. ಈ ಗ್ರಂಥಗಳಲ್ಲಿ ಒಂದಾದ 'ಕುಮುದೇಂದು ರಾಮಾಯಣ' ದಲ್ಲಿ ವೃಷಭಸೇನನೆಂಬವನು ಭರತನಿಗೆ ಮೊದಲು 'ರಾಮಾಯಣದ' ಕಥೆಯನ್ನು ತಿಳಿಸಿದನೆಂದೂ, ತರುವಾಯ ಅದನ್ನು ಗೌತಮಗಣಧರನು ಮಗಧದೇಶಾಧಿಪತಿಗೆ ಹೇಳಿದನೆಂದೂ ಬರೆದಿದೆ ಹೀಗೆ ಗಣಧರಪರಂಪರೆಯಿಂದ ವಿಶದವಾಗಿದ್ದ ರಾಮಕಥೆಯನ್ನು ತನ್ನ ಆಚಾರ್ಯನಾದ ಮಾಘನಂದಿ ಮುನಿಯು ಕೃಪೆಯಿಂದ ಕುಮುದೇಂದುಕವಿಯು ತಿಳಿದು ಅದಕ್ಕೆ ಅನುಸಾರವಾಗಿ ಈ ರಾಮಾಯಣವನ್ನು ತಾನು ರಚಿಸಿದನೆಂದು ಹೇಳುತ್ತಾನೆ. ಈ ರಾಮಕಥೆಯನ್ನು ಜೈನಕವಿಯಾದ ಕುಮುದೇಂದುವು ಪದ್ಯರೂಪವಾಗಿ ಬರೆದಿರುವನಾದಕಾರಣ ಈಗ್ರಂಥಕ್ಕೆ 'ಕುಮುದೇಂದು ರಾಮಾಯಣ' ಎಂದು ಹೆಸರು, ಈತನ ರಸಭರಿತವಾದ ಕವಿತ್ವದ ಪ್ರೌಢಿಮೆಗಾಗಿ 'ಪರವಾದ ಗಿರಿವಜ್ರ' (ಶತ್ರುವಾದಿಗಳೆಂಬ ಪರ್ವತಕ್ಕೆ ಅದನ್ನು ಖಂಡಿಸುವ ವಜ್ರದಂತೆ ಇರುವವನು), 'ಕವಿರಾಜ ಶಿಖಾಮಣಿ' (ಕವಿಶ್ರೇಷ್ಠರಿಗೆಲ್ಲ ಶಿಖಾಮಣಿಯಂತಿರುವವನು) ಎಂಬ ಬಿರುದುಗಳು ಈತನಿಗೆ ಕೊಡಲ್ಪಟ್ಟಿವೆ. ಈತನು ಸುಮಾರು ಕ್ರಿಸ್ತಶಕ ೧೩ನೆಯ ಶತಮಾನದಲ್ಲಿದ್ದಂತೆ ತಿಳಿಯಬರುತ್ತದೆ.

ಇದು ಷಟ್ಪದಿಕಾವ್ಯ. ಇದರಲ್ಲಿ ರಗಳೆವೃತ್ತದ ಪದ್ಯಗಳೂ ಕಾಣುವುವು. ಈ ಗ್ರಂಥದಿಂದ ಮಾದರಿಗಾಗಿ ಮಂದಾನಿಲರಗಳೆಗೂ, ಕುಸುಮಷಟ್ಪದಿಗೂ, ಪರಿವರ್ಧಿನಿ ಷಟ್ಪದಿಗೂ ಕೆಲವು ಪದ್ಯಗಳು ಉದ್ಧರಿಸಲ್ಪಟ್ಟು ಆಯಾ ಸ್ಥಳದಲ್ಲಿ ಸೇರಿಸಲ್ಪಟ್ಟಿವೆ.

---

ತುರಗಂಗಳ್ ಧೂಳಿಯನೊದವಿಸುತಿರೆ ।
ಕರಿಮದಧಾರೆಗಳದ ಮಾಣಿಸುತಿರೆ ॥
ಪಗಲಂ ದ್ವಿಗುಣಿಸೆ ಭೂಷಾದ್ಯುತಿಗಳ್ ।
ಮುಗಿಲಂ ಮುಟ್ಟೆ ಧ್ವಜಸಂತತಿಗಳ್ ॥೧೧೦॥

ಕವಿಗಮಕಿಗಳ ಸುಭಾಷಿತವೆಸೆದಿರೆ ।
ಭುವನಂ ಸೇನಾಮಯಮೆನಿಸುತ್ತಿರೆ ॥
ಬಂದು ಸುವೇಲಾಚಲಪರಿಸರದೊಳ್ ।
ಸಂದ ಸುವೇಲಾನಾಮದ ಪುರದೊಳ್ ॥೧೧೩॥

ಪುದಿದ ದಿಶಾಬ್ಧಿ ಖಚರನೆಡೆಗಟ್ಟಲ್ ।
ಮದಯುತನಳನಂತವಸಂ ಕಟ್ಟಲ್ ॥
ಭೃತ್ಯಂ ರಾಮಂಗಂಬುಧಿಯಾಗಲ್ ।
ಪ್ರತ್ಯರ್ಥಿವಾಸಿಗಳಂಜಿ ತಲೆವಾಗಲ್ ॥೧೧೪॥

ಬಿಡಿಸಿ ಪುರದ ಪರಿಸರದೊಳ್ ಬೀಡಂ ।
ತಡೆಯದೆ ವರಜಯಲಕ್ಷ್ಮಿಯ ಬೀಡಂ ॥
ಬರಿಸೆ ಪ್ರಭಾಮಂಡಲವೊದಲಾದರ ।
ಸುರುತರವಿದ್ಯಾಜನಿತವಿನೋದರ ॥೧೧೫॥

ಜಲಧಿಯ ಪೆಂಪಂ ನಡೆ ನೋಡುತ್ತುಂ ।
ನೆಲನಂ ನಿಜಭುಜಕಡೆವಿಡಾಡುತ್ತುಂ ॥
ನಲವಿಂದಿರ್ದಂ ದಶರಥರಾಮಂ ।
ಸುಲಲಿತದಿನಕರವಂಶಲಲಾಮಂ ॥೧೧೬॥

---

## ದೀಕ್ಷಾಬೋಧೆ.

ಸುಮಾರು ಕ್ರಿಸ್ತಶಕೆ ಹದಿಮೂರನೆಯ ಶತಮಾನದಲ್ಲಿದ್ದ ಕವಿ ಪದ್ಮರಸನೆಂಬ ಕವಿಯು ದೀಕ್ಷಾಬೋಧೆಯನ್ನು ಬರೆದಿರುವನು. ಈತನು ಹೊಯಿಸಳನಗರದಲ್ಲಿ ಆಳುತ್ತಿದ್ದ ನರಸಿಂಹದೇವನೆಂಬ ದೊರೆಗೆ ಮಂತ್ರಿಯಾಗಿದ್ದನು. ಶಿವಭಕ್ತನಾದ ಈತನು ಲಿಂಗವಂತರಲ್ಲಿ ಹೆಸರುಗೊಂಡ

ದ್ದಾನೆ. ಈ ಗ್ರನ್ಥದಲ್ಲಿ ಶೈವಾಗಮವೆನ್ನು ಕೊಂಡಾಡುವ ಸಂಸ್ಕೃತ ಶ್ಲೋಕಗಳು ಅಲ್ಲಲ್ಲಿ ಪ್ರಮಾಣವಾಗಿ ಉದಾಹರಿಸಲ್ಪಟ್ಟಿವೆ. ರಗಳೆಯು ವೃತ್ತದಲ್ಲಿಯೂ ಇತರ ವೃತ್ತದಲ್ಲಿಯೂ ಈ ಗ್ರನ್ಥವು ಬರೆದಿದೆ. ಮಾದರಿಗಾಗಿ ಈ ಗ್ರನ್ಥದಿಂದ ತೆಗೆದಿರುವ ವಿವಿಧ ನೀತಿಗಳು "ಲಲಿತರಗಳೆ" ಯಲ್ಲಿ ಬರೆದಿವೆ. ಇದೇ ವೃತ್ತಕ್ಕೆ ಮತ್ತೊಂದು ಉದಾಹರಣೆಯನ್ನು ಈ ಪುಸ್ತಕದ ಕೊನೆಯಲ್ಲಿ ಅಚ್ಚುಮಾಡಲ್ಪಟ್ಟಿರುವ 'ರಾಜಶೇಖರ ವಿಲಾಸ' ಗ್ರನ್ಥದ ಭಾಗದಲ್ಲಿ ನೋಡುವುದು.

'ಉತ್ಸಾಹ ರಗಳೆ' ಯ ಮಾದರಿಯನ್ನು ಈ ಪುಸ್ತಕದ ಕೊನೆಯಲ್ಲಿರುವ 'ಕಬ್ಬಿಗರ ಕಾವ' ಗ್ರನ್ಥದಲ್ಲಿ ನೋಡಬಹುದು.

---

## ೧೩. ವಿವಿಧ ನೀತಿಗಳು.

### ಲಲಿತರಗಳೆ.

ಮುನ್ನ ನೀ ಚರಿಸುವನ್ಯಾಯಮಂ ಬಿಡಬೇಕು ।
ಇನ್ನು ಸನ್ಮಾರ್ಗಸಂಪನ್ನನಾಗಿರಬೇಕು ॥
ದುಸ್ಸಂಗ ದುರ್ವಾಕ್ಯ ದುಶ್ಚರಿತ್ರಂಗಳಂ ।
ದುಶ್ಶೀಲ ದುರ್ಭೋಧೆ ದುರ್ವ್ಯಸನ ಗುಣಗಳಂ ॥೧೧೭॥

ಬಿಡಬೇಕು ಬಿಡದಿರಲು ಬಿಡುಗವೆಸ ಬುಧಸಂಗ ।
ತೊಡರುಗು ಮಹಾದ್ರೋಹ ಕಡುಪಾತಕರ ಸಂಗ ॥
ಅನ್ಯವಧುವನ್ಯಧನವಾಸೆಯಂ ಬಿಡಬೇಕು ।
ತನ್ನ ಸತಿ ತನ್ನ ಧನದುನ್ನತಿಯೊಳಿರಬೇಕು ॥೧೧೮॥

ಗುರುವಿನ ಸಮಕ್ಷದೊಳು ಬಹುಭೀತಿಯಿರಬೇಕು ।
ಗುರುವಿನಿದಿರಾಸನದೊಳಿರಲಂಜುತಿರಬೇಕು ॥
ಇರದಿರಲು ಮಾಪಾತಕಂ ದೊರೆಕುಗಾತಂಗೆ ।
ಪರಿಹರಿಸೆ ನಿಷ್ಕೃತಿಯದಿಲ್ಲವಘರೂಪಂಗೆ ॥೧೧೯॥

ಗುರುವಿನೊಳಗಪಹಾಸ್ಯ ಪ್ರತ್ಯುತ್ತರಂಗಳಂ ।
ಬೆರಳ ಚಿಟುಕಂ ಚರಣದೊಳ್ ವಿಕಾರಂಗಳಂ ॥
ಮಾಡಲಾಗದು ಶಿಷ್ಯ ಗುರುವಿನ ಸಮಕ್ಷದೊಳು ।
ಮಾಡಲೊಡನುನ್ನತಿಕೆಯಳಿದಿಹುದು ನೀತಿಯೊಳು ॥೧೨೦॥

ಹುಸಿಯಟಮಟಂಗಳಂ ಗುರುವಿನೊಳಗುಸಿರ್ದವಂ ।
ಶಿಶುವಧೆಯಮಾಳ್ಪವನ ದುರ್ಗತಿಗೆ ಪೋಪವಂ ॥
ಉತ್ಸಾಹ ಗುರುಭಕ್ತಿ ಯಚ್ಚಳಿಯದಿರಬೇಕು ।
ನಿಚ್ಚಳವ ನಿಷ್ಠೆ ದೃಢ ಕೆಚ್ಚುಗುಂದಿರಬೇಕು ॥೧೨೧॥

ನಿಯತಮುಪಚಾರಸಮಯ ತಾನಿರಬೇಕು ।
ನಯದ ವಾಕ್ಯಂ ಕರುಣೆ ದಾಕ್ಷಿಣ್ಯವಿರಬೇಕು ॥
ದಂಭಮಾತ್ಸರ್ಯಗಳಿಗಿಂಬುಗೊಡದಿರಬೇಕು ।
ಇಂಬಾಗಿ ಗುರುವಿನೊಳು ನಂಬುಗೆಯನಿಡಬೇಕು ॥೧೨೨॥

---

## ಷ ಟ್ಪ ದಿ .

### ಶರಷಟ್ಪದಿ.

### ೧೪. ಸಲ್ಲದ ಕಾರ್ಯಗಳು. (ದಾಸರ ಪದ*)

ಈಶನ ಕರುಣೆಯ ।
ನಾಶಿಸು ವಿನಯದಿ ।
ದಾಸನ ಹಾಗೆಯೆ ನೀ ಮನವೇ ॥
ಕ್ಲೇಶದ ವಿಧವಿಧ ।
ಪಾಶವ ಹರಿದು ವಿ ।
ಲಾಸದಿ ಸತ್ಯವ ತಿಳಿ ಮನವೇ ॥ ॥೧೨೩॥

ಮೋಸದಿ ಜೀವಿಯ ।
ಘಾಸಿಯ ಗೈದುದು ।
ಕಾಶಿಗೆ ಹೋದರೆ ಹೋದೀತೇ ॥

---

* ಗ್ರಂಥವನ್ನು ಬರೆದ ಕವಿಯ ಚರಿತ್ರವನ್ನು ೨ನೆಯ ಪುಟದಲ್ಲಿ ನೋಡಿರಿ.

ಭಾಷೆಯು ಕೊಟ್ಟ ನಿ ।
ರಾಶೆಯು ಪಡಿಸಲು ।
ಪೋಸವ ಮಾಡದೆ ಬಿಟ್ಟೀತೆ ॥೧೩೪॥

ಸತ್ಯದ ಧರ್ಮವ ।
ನಿತ್ಯವು ಬೋಧಿಸೆ ।
ತೊತ್ತಿನ ಮನಸಿಗೆ ಸೊಗಸೀತೇ ॥
ತತ್ತ್ವದ ಸಾರವ ।
ಚಿತ್ರದಿ ಪೇಳಲು ।
ಕತ್ತೆಯು ಮನಸಿಗೆ ತಿಳಿದೀತೇ ॥೧೩೫॥

ನ್ಯಾಯವ ಬಿಟ್ಟು ।
ನ್ಯಾಯವ ಪೇಳುವ ।
ನಾಯಿಗೆ ನರಕವು ತಪ್ಪೀತೇ ॥
ತಾಯನು ನಿಂದಿಸಿ ।
ನೋಯಿಸುತಿರುವ ।
ನ್ಯಾಯಿಗೆ ಸುಕೃತವು ದೊರಕೀತೇ ॥೧೩೬॥

ಬಾಯಿಯು ಕೊಬ್ಬಿಂ ।
ನೋಯಲು ನುಡಿವಗೆ ।
ಗಾಯವು ತಾಗದೆ ಬಿಟ್ಟೀತೇ ॥
ಮಾಯದ ಮನದೊಳ ।
ಪಾಯವ ಗೈವಗೆ ।
ಕಾಯದ ಕಷ್ಟವು ತಪ್ಪೀತೇ ॥೧೩೭॥

---

## ಮುಪ್ಪಿನ ಷಡಕ್ಷರಿಯ ವಚನ.

ಷಟ್ಪದಿಗಳಲ್ಲಿ ಬರೆದಿರುವ 'ಕೆಲವು ವಚನಗಳನ್ನು' ಷಡಕ್ಷರೀ ದೇವನೆಂಬ ಹೆಸರಿನ ಒಬ್ಬ ಕವಿಯು ರಚಿಸಿದನೆಂದು ಹೇಳುವರು. ಪ್ರಸಿದ್ಧವಾದ 'ರಾಜಶೇಖರವಿಲಾಸ' ಗ್ರಂಥವನ್ನು ಬರೆದ ಷಡಕ್ಷರಿದೇವನೇ

ಬೇರೆ, ಈ ಗ್ರಂಥಕರ್ತೃವಾದ ಷಡಕ್ಷರಿಯೇ ಬೇರೆ ಎಂದು ತಿಳಿಸುವುದಕ್ಕೋಸ್ಕರ ಅಷ್ಟು ಪ್ರಸಿದ್ಧನಲ್ಲದ ಇವನನ್ನು 'ವೃದ್ಧಪರಾಶರ' ಎಂಬಂತೆ 'ಮುಪ್ಪಿನ ಷಡಕ್ಷರೀ' ಎಂದು ಕರೆಯುವರು. ಈತನ ಗ್ರಂಥದ ಒಕ್ಕಣೆಯನ್ನೂ ಭಾವಗಳನ್ನೂ ಪರಿಶೀಲಿಸಿ ನೋಡುವಾಗ ಈತನು ಆಧುನಿಕ ಕವಿಯೆಂದು ತೋರುವುದು; ಮತ್ತು ಕವಿತ್ವವೂ ಸಾಧಾರಣವಾಗಿದೆ. ಕುಸುಮ ಭೋಗಷಟ್ಪದಿಗಳ ಮಾದರಿಗಾಗಿ ಕೆಲವು ಪದ್ಯಗಳು ಈ ಕವಿಯ ಗ್ರಂಥದಿಂದ ಉದ್ಧರಿಸಲ್ಪಟ್ಟವೆ. ಈ ಕವಿಯ ನಿಜವಾದ ಹೆಸರೂ ಇವನ ಚರಿತ್ರವೂ ಗೊತ್ತಿಲ್ಲ.

---

ಕುಸುಮ ಷಟ್ಪದಿ.

## ೧೫. ಪಾಪಿಯ ಪಶ್ಚಾತ್ತಾಪ.

ದ್ವೇಷಿಪಾಸವನು ನಾ ।
ಭಾಷೆ ತಪ್ಪಿದವ ನ ।
ರ್ವೇಶನೊಳು ಸಲುಗೆ ನನಗೆಂತಪ್ಪುದು ॥
ಘಾಸಿಯಾದೆನು ಭವದಿ ।
ಯೋಸರಿಸಿ ಬೀಳ್ವನೆ ।
ನ್ನೀಶನಂಘ್ರಿಗೆ ಕರುಣ ಬೇಡಿಕೊಂಬೆ ॥೧೭೮॥

ಉದ್ಧರಿಸುವರ ಕಾಣೆ ।
ನಿದ್ದೆಸೆಯ ಕೆಡಿಸಿದೆನು ।
ಹೊದ್ದರಿನ್ನೆನ್ನ ನಾಲ್ದೆಸೆಯ ನಾನು ॥
ಬಿದ್ದೆ ನಿನ್ನಯ ಪಾದ ।
ಕುದ್ಧರಿಸಿ ರಕ್ಷಿಸೈ ।
ಯೊದ್ದೆನ್ನ ನೀ ನೂಕಿ ಬಿಡಬೇಡಪ್ಪ ॥೧೭೯॥

ನೀತಿಯುಱಿಯದೆ ನಾನು ।
ಪಾತಕದ ನಡೆಯಲ್ಲಿ ।
ಭೂತಳದೊಳಂ ನಡೆದೆ ಗತಿಯಾವುದು ॥

ಓತು ಕರುಣಿಸಿ ನನ್ನ ।
ಪಾತಕಾಭ್ರಕೆ ಝಂಝಾ ।
ವಾತವಾಗಿದ್ದೆನ್ನ ರಕ್ಷಿಸಯ್ಯ ॥೧೨೦॥

---

ಕುಮುದೇಂದು ರಾಮಾಯಣ.

**೧೬. ರಾಮಲಕ್ಷ್ಮಣರು ಸೀತೆಯೊಡನೆ ವನದಲ್ಲಿ ಸಂಚರಿಸಿದುದು.**

ನಡೆದು ಕೆಲವೆಡೆಯೊಳಂ ।
ತಡೆದು ತಡೆದಲ್ಲಲ್ಲಿ ।
ಯೆಡೆಯೆಡೆಯ ತರುಚಯಂಗಳ ತೋಱುತ ॥
ಅಡಿಗಡಿಗೆ ನಮಗಿನ್ನು ।
ಬಿಡುವ ತಾವಾವುದೆಂ ।
ದೊಡರಿಸಿದಳಳಲನವನಿಜೆ ರಾಮಗೆ ॥೧೨೧॥

ತೊಳಪ ಪಳುಕಿನ ಪಾದ ।
ಶಿಲೆಯೊಳಗೆ ನಡೆಯುತಂ ।
ಬಲುಘುತರತಪನತಾಪದೆ ಬಳಲುವ ॥
ಸುಲಲಿತಲತಾಂಗಿ ಕೋ ।
ಮಲೆ ಸೀತೆ ರಾಘವನ ।
ಬಳಿವಳಿಯ ನೆಳಲಂತೆ ಬರುತಿರ್ದ್ದಳು ॥೧೨೨॥

ಕೆಲಕೆಲವೆಡೆಯೊಳು ಕೆ ।
ನ್ದಳಿರನೊಲವಿಂದೆ ಕೆಂ ।
ದಳಕೆ ಪಡಿಯಿಡುವಂತೆ ಲಕ್ಷ್ಮೀವರಂ ॥
ಲಲಿತತರಭಕ್ತಿಯಿಂ ।
ನಲಿನಲಿದು ಪಸರಿಸುತಿ ।
ರೆ ಸೀತೆ ಮೆಲ್ಲಮೆಲ್ಲನೆ ನಡೆದಳು ॥೧೨೩॥

---

* ಈ ಗ್ರಂಥವನ್ನು ಬರೆದ ಕವಿಯ ಚರಿತ್ರವನ್ನು ೧೪ನೆಯ ಪುಟದಲ್ಲಿ ನೋಡಿರಿ.

ಎಸೆವ ಮುಖಶಶಿಸುಧಾ
ರಸವಿಸರವೆಂಬಂತೆ ।
ಪಸರಿಸುವ ಬೆಮರ ಬಿಂದುಗಳ ತಳೆದು ॥
ನಸುಬಾಡಿದಂಗಲತೆ ।
ಯುಸದಳಂ ಸೊಗಸೆ ತ ।
ನ್ನಸಿಯಳಂ ನೋಡುತುಂ ರಾಮ ನಡೆದಂ ॥೧೩೪॥

ಹಸಿವು ಬಳಲಿಕೆ ತೃಷೆಯು ।
ದೆಸೆಯನರಿಯೆಂ ನೀರ ।
ದೆಸೆಯುಮಂ ನೆಲಿಲ ದೆಸೆಯಂ ನೋಡುತ ॥
ಅಸುಗಪಳರಿಂದ ವಿರ ।
ಚಿಸುತ ಶಯ್ಯಾಸೀಯುಮಂ ।
ಮಸುಪ ಭಕ್ತಿಯೊಳು ಲಕ್ಷ್ಮಣ ನಡೆದನು ॥೧೩೫॥

ತುಂಗಸಾರ್ವ್ವರ್ತುಕಪ ।
ನಂಗಳ ಲತಾಮಂಟ ।
ಪಂಗಳ ಸರಿತ್ಸರೋವರ ಕೋಟಿಯು ॥
ರಂಗದ್ವಿಶಾಲಕೂ ।
ಟಂಗಳ ವಿಲಾಸದೆ ಮ ।
ನಂಗೊಳಿಪ ಚಿತ್ರಕೂಟವ ಕಂಡರು ॥೧೩೬॥

ಆ ಗಿರಿಯ ಶೋಭೆಯುಂ ।
ರಾಗದಿಂ ನೋಡುತುಂ ।
ಬೇಗದಿಂ ಬಲಿಕಿಕ್ಕಿ ಕಳೆದು ಬಂದು ॥
ಶ್ರೀಗೆ ನೆಲೆಯೆನಿಸಿ ಚೆಲು ।
ವಾಗಿರ್ದ ವಟವಿಟಪಿ ।
ಯೊಗಕ್ಕೆ ಬಂದರಂತಾಮೂವರು ॥೧೩೭॥

## ಭೋ ಗ ಷ ಟ್ಪ ದಿ .

### * ಮುಪ್ಪಿನ ಷಡಕ್ಷರಿಯ ವಚನ.

### ೧೭. ತಿರುಕನ ಸ್ವಪ್ನವು.

ತಿರುಕನೋರ್ವನೂರ ಮುಂದೆ ।
ಮುಱುಕು ಧರ್ಮಶಾಲೆಯಲ್ಲಿ ।
ಒಱಗಿರುತ್ತಲೊಂದು ಕನಸ ಕಂಡನೆಂತೆನೆ ॥
ಪುರದ ರಾಜ ಸತ್ತನವಗೆ ।
ವರಕುಮಾರರಿಲ್ಲದಿರಲು ।
ಕರಿಯು ಕೈಗೆ ಕುಸುಮಮಾಲೆಯಿತ್ತು ಪುರದೊಳು ॥೧೩೮॥

ಬಿಡಲ ದಾರ ಕೊರಳಿನಲ್ಲಿ ।
ತೊಡರಿಸಲ್ಕೆಯವರ ಪಟ್ಟ ।
ದೊಡೆಯರನ್ನು ಮಾಳ್ಪೆವೆಂದ ಬಿಟ್ಟರಲ್ಲಿಗೆ ॥
ಒಡನೆ ತನ್ನ ಕೊರಳಿನಲ್ಲಿ ।
ತೊಡರಿಸುವುದ ಕಂಡು ತಿರುಕ ।
ಪೊಡವಿಯಾಣ್ಮನೆಂದು ಮನದಿ ಹಿಗ್ಗುತಿರ್ದನು ॥೧೩೯॥

ಪಟ್ಟಗಟ್ಟಲವಗೆ ನೃಪರು ।
ಕೊಟ್ಟರವರ ಕನ್ಯೆಯರನು ।
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೇ ॥
ಭಟ್ಟಿಸಿಗಳ ಕೂಡಿ ನಲ್ಲ ।
ನಿಷ್ಟಸುಖದೊಳಿರಲಿಕವಗೆ ।
ಹುಟ್ಟಿ ಹೆಣ್ಣುಗಂಡುಮಕ್ಕಳಾದುವಾಗಲೇ ॥೧೪೦॥

ಓಲಗದಲಿರುತ್ತ ತೊಡೆಯ ।
ಮೇಲೆ ಮಕ್ಕಳಾಡುತಿರಲು ।
ಲೀಲೆಯಿಂದ ಚಾತುರಂಗಬಲವ ನೋಡುತ ॥
ಲೋಲನಾಗಿ ನುಡಿದನಿನಿತು ।
ಕೇಳು ಮಂತ್ರಿ ಸುತರುಗಳಿಗೆ ।
ಬಾಲೆಯರನು ನೋಡಿ ಮದುವೆಮಾಡಬೇಕೆಲೈ ॥೧೪೧॥

* ಈ ಗ್ರಂಥಕರ್ತೃವಿನ ಚರಿತ್ರವನ್ನು [illegible]ನೆಯ ಪುಟದಲ್ಲಿ ನೋಡಿರಿ.

ನೋಡಿ ಬನ್ನಿರೆನಲು ಜೀಯ।
ನೋಡಿ ಬಂದೆವೆನಲು ಬೇಗ।
ಮಾಡು ಮದುವೆಯೆಂಟುದಿವಸದೊಳು ಸಕಲಕಾರ್ಯವ॥
ಗಾಢವಾಗೆ ಸಂಭ್ರಮಂಗಳು।
ಮಾಡುತಿದ್ದ ಮದುವೆಗಳನು।
ಕೂಡಿದಖಿಳರಾಯರುಗಳು ಮೆಚ್ಚು ವಂದದಿ ॥೧೪೨॥

ಧನದ ಮದದ ರಾಜ್ಯಮದದ।
ವನಿತೆಸುತರ ನೋಡಿ ತಿರುಕ।
ಧನಿಕನಾಗಿ ಕಾಣುತಿರ್ದ ಕನಸಿನಲ್ಲಿಯೆ॥
ಅನಿತು ಸ್ವಪ್ನ ವಂದು ಬಂದು।
ಮನೆಯ ಮುತ್ತಿದಂತೆಯಾಗೆ।
ಕನಸ ಕಾಣುತಿರ್ದ್ದ ಹೆದರಿ ಕಣ್ಣುತೆರೆದನು ॥೧೪೩॥

ಮೆಱೆಯುತಿದ್ದ ಭಾಗ್ಯವೆಲ್ಲ।
ಮಱೆದುಹೋಯಿತೆನುತ ತಿರುಕ।
ಮರಳಿ ನಾಚಿ ಪೋಗುತಿರ್ದ ಮರುಳನಂತೆಯೆ॥
ಧರೆಯ ಭೋಗವನ್ನು ಮೆಚ್ಚಿ।
ಪರವ ಮಱೆತು ಕೆಡಲು ಬೇಡ।
ಧರೆಯಭೋಗ ಕನಸಿನಂತೆ ಕೇಳು ಮಾನವಾ ॥೧೪೪॥

---

## ರಾಮಾಭ್ಯುದಯಕಥಾ ಕುಸುಮಮಂಜರಿ.

### (ಆನಂದ ರಾಮಾಯಣ.)

ಕನ್ನಡ ಕವಿಗಳಲ್ಲಿ ರಾಮಾಯಣದ ಕಥೆಯನ್ನು ಕಾವ್ಯರೂಪವಾಗಿ ಬರೆದವರು ಅನೇಕರುಂಟು. ಜೈನಮತಾವಲಂಬಿಯಾದ ಪಂಪ ಮಹಾಕವಿಯಿಂದ ರಚಿತವಾದ ರಾಮಚರಿತಕ್ಕೆ 'ಪಂಪರಾಮಾಯಣ' ಎಂದು ಹೆಸರು. ತೊರವೆಯಲ್ಲಿ ಪುಟ್ಟಿ ಬೆಳೆದು ಆ ಊರಿನ ನೃಸಿಂಹ

ದೇವರ ಭಕ್ತನಾದ 'ಕುಮಾರ ವಾಲ್ಮೀಕಿ' ಎಂಬ ಬಿರುದುಳ್ಳ ಬ್ರಾಹ್ಮಣ ಕವಿಯು 'ತೊರವೆರಾಮಾಯಣ' ವನ್ನು ರಚಿಸಿರುವನು. ಈಚೆಗೆ ಸುಮಾರು ಕ್ರಿಸ್ತಶಕ ೧೯ನೆಯ ಶತಮಾನದ ಆದಿಭಾಗದಲ್ಲಿ ತಿಮ್ಮಾರ್ಯನೆಂಬ ಮರದೂರು ಹೆಬ್ಬಾರು ಪಂಗಡದ ಬ್ರಾಹ್ಮಣ ಕವಿಯು 'ರಾಮಾಭ್ಯುದಯ ಕಥಾಕುಸುಮಮಂಜರಿ' ಎಂಬ ಹೆಸರಿನಿಂದ ಶ್ರೀರಾಮಚರಿತವನ್ನು ಬರೆದಿರುವನು. ಈ ರಾಮಾಯಣಕ್ಕೆ 'ಆನಂದ ರಾಮಾಯಣ'ವೆಂದು ಹೆಸರು. ಈ ಕವಿಯು ಬೆಂಗಳೂರು ಡಿಸ್ಟ್ರಿಕ್ಟಿಗೆ ಸೇರಿದ ಆನೇಕಲ್ ತಾಲ್ಲೂಕಿನಲ್ಲಿರುವ ಸಾದಲಿ (ಸಹದೇವಪುರ) ಗ್ರಾಮದ ತಿಮ್ಮರಾಯಸ್ವಾಮಿಗೆ ತನ್ನ ಗ್ರಂಥವನ್ನು ಮೀಸಲಾಗಿ ಸಮರ್ಪಿಸಿರುವನು. ಇದರಿಂದ ಆತನು ಆ ಊರಿನ ನಿವಾಸಿಯಾಗಿರಬಹುದೆಂದು ಊಹಿತವಾಗುತ್ತದೆ. ಈತನ ತಂದೆಯ ಹೆಸರು ವೆಂಕಟೇಶಪ್ಪ. ಈ ಮನೆತನದವರು ಬೆಂಗಳೂರು ಸಮೀಪದಲ್ಲಿರುವ ಅಗರದ ಗುಡಿಯ ಅರ್ಚಕರು; ದೇವರಲ್ಲಿ ವಿಶೇಷವಾಗಿ ಭಕ್ತಿಯುಳ್ಳವರು. ತಿಮ್ಮಾರ್ಯ ಕವಿಯು ೧೫ ವರ್ಷದ ಬಾಲಕನಾಗಿರುವಾಗಲೇ ಸ್ವಾಮಿಯ ಕೃಪೆಗೆ ಪಾತ್ರನಾಗಿ ಸರಸ್ವತಿಯ ಪ್ರಸಾದದಿಂದ ಕವಿತ್ವಮಾಡುವ ಶಕ್ತಿಯನ್ನು ಪಡೆದನೆಂದು ಹೇಳುವರು. ಕ್ರಮವಾದ ವಿದ್ಯಾಭ್ಯಾಸವನ್ನೂ ಗುರು ಶಿಕ್ಷೆಯನ್ನೂ ಹೊಂದಿದವನಲ್ಲವಾದರೂ ಈತನು ಭಗವತ್ಕೃಪೆಯಿಂದ ಪದ್ಯಗಳನ್ನು ಯಾವ ಪ್ರಯತ್ನವೂ ಇಲ್ಲದೆ ಬಾಯಲ್ಲಿ ಹೇಳುತ್ತಿದ್ದನು. ಪ್ರತಿನಿತ್ಯವು ಸ್ನಾನಮಾಡಿಕೊಂಡು ಶುಚಿಯಾದ ಅಂತಃಕರಣವುಳ್ಳವನಾಗಿ ತನ್ನ ಕುಲದೈವವಾದ ತಿಮ್ಮರಾಯಸ್ವಾಮಿಯನ್ನು ನಮಸ್ಕರಿಸಿ ಭಜಿಸಲು ಈತನಿಗೆ ಸ್ವಾಮಿಯ ಆವೇಶಬಂದಂತೆ ಒಂದು ಕವಿತಾಶಕ್ತಿಯು ತಲೆದೋರುತ್ತಿದ್ದಿತು. ಅದರ ಮಹಿಮೆಯಿಂದ ಪದ್ಯಗಳು ಈತನ ವದನಾರವಿಂದದದೆಸೆಯಿಂದ ಹೊರಡುತ್ತಿದ್ದುವು. ಇವುಗಳನ್ನು ಅಲ್ಲಿದ್ದ ಈತನ ಸಂಬಂಧಿಯೊಬ್ಬನು ಕೂಡಲೆ ಬರೆದು ಗುರುತು ಹಾಕುತ್ತಿದ್ದನು. ಈ ಗ್ರಂಥವು ಭಾಮಿನೀಷಟ್ಪದಿಯಲ್ಲಿ ರಚಿಸಲ್ಪಟ್ಟಿದೆ. ಈ ಗ್ರಂಥದಿಂದ ಮೊದಲಿಗಾಗಿ ವಿಭೀಷಣ ರಾವಣಾದಿ ಸಂವಾದವು ಇಲ್ಲಿ ಉದಹರಿಸಲ್ಪಟ್ಟಿದೆ.

---

## ಭಾಮಿನೀಷಟ್ಪದಿ.

### ೧೮. ವಿಭೀಷಣ ರಾವಣಾದಿ ಸಂವಾದ.

ಕೇಳುತವರ ದುರುಕ್ತಿಗಳಿಗನು ।
ಕೂಲಬಡದೆ ಮಹೋಗ್ರಕೋಪ ಭ ।
ಡಾಳಿಸಲು ಮುರಿಮೀಸೆ ಕುಣಿಕುಣಿದಾಡೆ ಕಣ್ಣಾಲಿ ॥
ಕೀಲಿ ಕಿಡಿಕಿಡಿಮಸಗೆ ವಿಲಯದ ।
ಕಾಲಭೈರವನಂತೆ ಸುತ್ತಿನ ।
ಖೂಳದನುಜರಿಗಾ ವಿಭೀಷಣದೇವನಿಂತೆಂದ ॥೧೪೫॥

ಹೋಹೊ ಗಜಬಜಿದೇಕೆ ಮಾಮಾ ।
ಸಾಹಸಿಗಳಹುದಹುದು ಬಲ್ಲೆವು ।
ಬೇಹುಕಪಿ ತಾನೊಂದು ಬಂದೀಪುರವನನಲಂಗೆ ॥
ಆಹುತಿಯನಿತ್ತುರುಹಿ ದನುಜಸ ।
ಮೂಹಗಳ ಕೊಲುವಾಗ ನಿಮ್ಮಯ ।
ಬಾಹುಬಲವೇನಾಯ್ತು ನಾಚಿಕೆಯಿಲ್ಲ ನಿಮಗೆಂದ ॥೧೪೬॥

ಮನುಜರಾದೊಡೆ ರಾಕ್ಷಸರ ಹಗೆ ।
ಗೆನುತ ಬಹರೇ ಕಾಡಕಪಿಗಳು ।
ಜನಪರಾಜ್ಞಾಪಿಸಿದ ಕಾರ್ಯಕೆ ತನುವ ತೆತ್ತಿಹರೆ ॥
ವನಧಿಯ ಲಂಘಿಸುವ ಸಾಹಸ ।
ಹನುಮಗಲ್ಲಿಯದೆಂಬ ಘನಯೋ ।
ಜನೆಯ ತಿಳಿಯದ ದುರುಳರಾಟಕೆ ಸಿಲುಕಬೇಡೆಂದ ॥೧೪೭॥

ತರಣಿವಂಶಜ ಕೋಪದಲಿ ಸಾ ।
ಗರವ ದಾಂಟದ ಮುನ್ನ ಘನವಾ ।
ನರಪತಾಕಿಸಿ ಮುಸುಕಿ ಲಂಕೆಯ ಕೊಳ್ಳದಿಹಮುನ್ನ ॥
ಕೆರಳಿ ಲಕ್ಷ್ಮಣನಂಬು ರಾತ್ರಿಂ ।
ಚರರ ಪಳಚದ ಮುನ್ನ ಸೀತಾ ।
ತರುಣಿಯನು ರಘುನಾಥಗೊಪ್ಪಿಸಿ ಬದುಕಬಹುದೆಂದ ॥೧೪೮॥

ಬಿದ್ದು ಮರಣದ ಕನಸು ಕಣ್ಡವ ।
ರೆದ್ದು ಕುಳಿತಂದದಲಿ ವ್ಯರ್ಥದ ।
ಸುದ್ದಿಗಳನುಳಿದನಕುಲೇಂದ್ರನ ಪಾದಪದುಮಗಳ ॥
ಹೊದ್ದಿ ಸೀತೆಯನೊಪ್ಪಿಸಿಯೆ ನಾ ।
ವಿದ್ದು ಸಕಲರ್ವೆರಸಿ ಸುಖದಲಿ ।
ಬಿದ್ದು ಬದುಕುವುದುಚಿತ ನಿನ್ನೊಳು ತಿಳಿದು ನೋಡೆಂದ ॥೧೪೯॥

ಹೇಳಲೇನಸುರೇಂದ್ರ ನಿನ್ನಯ ।
ಮೌಳಿಗೊಡ್ಡಿದ ಸಿಡಿಲು ಹಸ್ತದ ।
ಕಾಳಪನ್ನಗ ಕಂಠಬದ್ಧ ಮಹೋಗ್ರಯಮಪಾಶ ॥
ಬಾಲಕಿಯ ರೂಪದಲಿ ಬಂದಿಹ ।
ಕಾಲಮೃತ್ಯುಕಣಾ ಮಹೀಸುತೆ ।
ಧೂಳಿಗೆಯ್ಯದೆ ಬಿಡಳು ರಾಕ್ಷಸಕುಲವ ಕೇಳೆಂದ ॥೧೫೦॥

ವಿಗ್ರಹಕೆ ಪ್ರತಿಭಟಿಸಿ ರಘುಪತಿ ।
ರಾಗ್ರಗಣ್ಯನು ನಿಂದೊಡವನ ಶ ।
ರಾಗ್ರದಗ್ನಿಜ್ವಾಲೆಗಿದಿರಹರಾರು ತ್ರಿಭುವನದಿ ॥
ಉಗ್ರಕಮಲಭವಾದಿದೇವ ಸ ।
ಮಗ್ರವುಂ ಮರೆವುಗಲು ಬಿಡದು ಪ ।
ರಿಗ್ರಹಿಪನಿನ್ನಾವನುಂಟಸುರೇಂದ್ರ ಕೇಳೆಂದ ॥೧೫೧॥

ಈ ಮದಾಂಧಸುರೇಂದ್ರಜಿತು ಮು ।
ತ್ರೀಮಹೋದರನೀಸುಪಾರ್ಶ್ವಕ ।
ನೀಮನುಜರಿಪುವೀಪ್ರಹಸ್ತ ಪ್ರಮುಖನಾಯಕರು ॥
ರಾಮನಂಬಿನ ಗಱಿಯ ಗಾಳಿಯು ।
ಸೀಮೆಯೊಳಗಿರಲಮ್ಮರಿದು ನಿಜ ।
ಭ್ರಾಮಕರ ನುಡಿಗೇಳಿ ಕೆಡಬೇಡೆಂದ ತೃಣವಿಡಿದು ॥೧೫೨॥

ಸುರಪಜಿತು ಕೇಳ್ದಾಗ ಪೊರೆಯುಗಿ ।
ದುರಗನಂತುರಿದೆದ್ದು ನರಪಾ ।
ನರರ ಬಲುಹಂ ಪೊಗಳ್ದು ನಮ್ಮನು ಜಱಿದ ಸಭೆಯೊಳಗೆ ॥

ಕಿಱಿಯ ತಂದೆಯೆನುತ್ತ ತಾಳಿದೊ ।
ಡಱಿಯೆ ಪರನಾದೊಡೆಯು ಜಿಹ್ವೆಯ ॥
ಕೊಱೆವೆ ನೀಪರಿಹಾಸ್ಯವಚನವ ನುಡಿಯಬೇಡೆಂದ ॥೧೫೩॥

ಪಿಡಿದೆನಿಂದ್ರನ ತೊಡೆದೆನನಲನ ।
ಬಡಿದೆ ಶಮನನ ಜಡಿದೆ ನಿರುತಿಯ ।
ಕಡಿದೆವರುಣಮರುತ್ಕುಬೇರೇಶಾನ ಮುಖ್ಯರನು ॥
ಮೃಡನ ವರಗಳ ಪಡೆದ ಕಡುಗಲಿ ।
ಯೊಡನೆ ಕೋಡಗಪಡೆಯ ಮನುಜರ ।
ಸಡಗರವ ನೀನೆಂತು ಪೊಗಱುದೆಯೆನುತ ಗರ್ಜಿಸಿದ ॥೧೫೪॥

ಕುಲವಿನಾಶಕ ಕೇಳಲೆವೊ ನೀ ।
ಗೆಲಿದ ದಿಗುಪಾಲಕರು ರಘುಕುಲ ।
ತಿಲಕನಡಿದಾವರೆಯ ಸೇವಕರೆಂಬುದಱಿಯೆಯಲಾ ॥
ಸುಲಭವೇ ಮೃಗರಾಜನೊಡನ ।
ಗ್ಗಳಿಕೆ ಬಡಜಂಬುಕಕೆ ಸಾರೆಂ ।
ದಲಘುಮತಿ ಹರಿಶರಣನುಡಿದನು ದನುಜವಲ್ಲಭಗೆ ॥೧೫೫॥

ಘುಡಿಘುಡಿಸುತಸುರೇಂದ್ರನನುಜನ ।
ಬಿಡೆಯದಿಂದೀಕ್ಷಿಸದೆ ಎಲವೋ ।
ಕಡುಗಲಿಗನೇ ರಾಮನವನೇ ನನ್ನ ಕೊಲುವವನು ॥
ಘಡಘಡೆನುತಾರ್ಭಟಿಸಿ ಕಡುಗನ ।
ಜಡಿದು ಗದ್ದುಗೆಯಿಳಿದು ಪಾದದ ।
ತೊಡರು ಝಣರೆನಲೊಸದು ಕೆಡಹಿದನವನಿ ಕಂಪಿಸಲು ॥೧೫೬॥

ಅನಿತಱೊಳ್ದಶಮುಖನು ನಿಜಸಖಿ ।
ವನಿಗುಸುರಿದನು ತನ್ನ ದೇಹದಿ ।
ಜನಿಸಿದತಿರುಜೆ ತನ್ನನೇ ಕೊಲುವಂತೆ ಮತ್ಸರವ ॥
ನೆನೆದಸೀತನ ಮೊಗವನೋಡುವು ।
ದನುಚಿತವು ಪೊಱಮಡಿಸು ಶೀಘ್ರದೊ ।
ಳೆನಲು ಕರಪಿಡಿದೆತ್ತಿ ನಗರದೊಳಿರದೆ ಪೋಗೆಂದ ॥೧೫೭॥

ದನುಜವಲ್ಲಭನಡಿಗಳಿಗೆ ವಂ।
ದನೆಯ ರಚಿಸಿ ವಿಭೀಷಣನು ಮೇ।
ಣನಲಹರಸಂಪಾತಿನೀಳಾಹ್ವಯದ ಮಂತ್ರಿಗಳ ॥
ಘನವಮನೋವ್ಯಥೆಯುಕ್ಕುತಿರಲಾ।
ಸನವನೀಕ್ಷಿಸಿಯೆಬ್ಬಿಸಿಡೆ ಮಿಗೆ।
ಕನಲಿ ಗದೆಯಂ ಜಡಿವುತಿದಿರಲಿ ನುಡಿದನಾಗ್ರಹದಿ ॥೧೫೪॥

ಎಲೆ ದುರಾತ್ಮಕ ನಿನ್ನ ದುರ್ಗವ।
ಬಳಸಿ ಕಪಿಬಲ ಮುತ್ತಿ ತಮ್ಮ।
ಗ್ಗಳಿಕೆಯಲಿ ತವ ಪುತ್ರಮಿತ್ರ ಸಗೋತ್ರ ಬಾಂಧವರ ॥
ಲಲನೆಯರ ನೆಳವಾಗ ರಘುಕುಲ।
ತಿಲಕನಂಬಿನ ಕೋಟಿ ನಿನ್ನಯ।
ತಲೆಗಳಂ ತಱಿವಾಗ ನೆನೆಯೆಂದೆನುತ ತಿರುಗಿದನು ॥೧೫೫॥

---

## ಪ್ರಭುಲಿಂಗಲೀಲೆ.

ಭಾಮಿನೀಷಟ್ಪದಿಯಲ್ಲಿ ಬರೆದಿರುವ ಈ ಗ್ರಂಥವನ್ನು ಚಾಮರಸನೆಂಬ ಲಿಂಗವಂತ ಕವಿಯು ರಚಿಸಿದನು. ಈ ಕವಿಯು ಸುಮಾರು ಕ್ರಿಸ್ತಶಕ ೧೫ನೆಯ ಶತಮಾನದಲ್ಲಿ ಹೆಸರುಗೊಂಡಿದ್ದಂತೆ ತಿಳಿಯಬರುತ್ತದೆ. ವಿಜಯನಗರದಲ್ಲಿ ೧೪೫೧—೧೪೭೫ರ ವರೆಗೆ ಆಳುತ್ತಿದ್ದ ಪ್ರೌಢರಾಯನ ಕಾಲದಲ್ಲಿ ಚಾಮರಸ ಕವಿಯು ಆಸ್ಥಾನ ಪಂಡಿತನಾಗಿದ್ದನು. ಆ ಧೊರೆಯು ತಾನು ಅನುಸರಿಸಿದ್ದ ಲಿಂಗವಂತರ ಮತವನ್ನು ಪ್ರಚಾರಪಡಿಸಲು ವಿಂಧ್ಯಪರ್ವತದಿಂದ ಸುಮಾರು ಕನ್ಯಾಕುಮಾರಿಯವರೆಗೂ ವಿಸ್ತರಿಸಿದ್ದ ತನ್ನ ರಾಜ್ಯವಲ್ಲೆಲ್ಲಾ ಪ್ರಸಿದ್ಧವಾಗುವಂತೆ ತನ್ನ ಪ್ರಜೆಗಳು ಮಾತನಾಡತಕ್ಕ ಮುಖ್ಯಮುಖ್ಯ ದೇಶಭಾಷೆಗಳಲ್ಲಿ ಈ ಗ್ರಂಥವು ರಚಿತವಾಗುವ ಹಾಗೆ ಅಪ್ಪಣೆಮಾಡಿದನು. ಆದಕಾರಣ ಕನ್ನಡಭಾಷೆಯಲ್ಲಿ ವಿರಚಿತವಾಗಿದ್ದ ಈ ಪ್ರಭುಲಿಂಗಲೀಲೆಯು ಪಿಡುಪರ್ತಿ ಸೋಮಯ್ಯನ ಮೂಲಕ ತೆನುಗು ಭಾಷೆಗೂ, ಶಿವಪ್ರಕಾಶದೇಶಿಕನೆಂಬ ಅರವ ಕವಿಯ ಮೂಲಕ ತಮಿಳು ಭಾಷೆಗೂ ಭಾಷಾಂತರ ಮಾಡಲ್ಪಟ್ಟಿತು.

ಈ ಗ್ರಂಥಕ್ಕೆ ಪ್ರಭುಲಿಂಗನೆಂಬ ಶಿವಭಕ್ತನೇ ಕಥಾನಾಯಕನು ಈತನಿಗೆ ಅಲ್ಲಮಪ್ರಭು, ಪ್ರಭುದೇವ, ಗುಹೇಶ್ವರಲಿಂಗ ಈ ಹೆಸರುಗಳೂ ಉಂಟು. ನಿರಹಂಕಾರ ಮತ್ತು ಸುಜ್ಞಾನಿ ಇವರೇ ಇವನಿಗೆ ತಾಯಿತಂದೆಗಳು. ಶಿವನ ಗಣನಾಥನೇ ಭೂಮಿಯಲ್ಲಿ ಈ ಪ್ರಭುಲಿಂಗನಾಗಿ ಅವತರಿಸಿದನೆಂದು ಹೇಳುವರು. ಇವನ ವೈರಾಗ್ಯಸಂಪತ್ತನ್ನೂ ಭಕ್ತಿಭಾವವನ್ನೂ ಪರೀಕ್ಷಿಸುವುದಕ್ಕೋಸ್ಕರ ಪಾರ್ವತೀದೇವಿಯು ತನ್ನ ತಾಮಸ ಗುಣವನ್ನು ಭೂಮಿಯಲ್ಲಿ ಅವತರಿಸಿ ಅವನ ಮನಸ್ಸನ್ನು ಶೋಧಿಸುವಂತೆ ಆಜ್ಞಾಪಿಸಲಾಗಿ, ಆ ಗುಣವು ಪೂರ್ವದಲ್ಲಿ ಬಳವಾಡದೇಶವೆಂದು (ಈಗಿನ ಶಿವಮೊಗ್ಗಾ ಡಿಸ್ಟ್ರಿಕ್ಟಿನ ಅನೇಕ ಭಾಗ) ಪ್ರಸಿದ್ಧವಾಗಿದ್ದ ಸೀಮೆಯ ರಾಜಧಾನಿಯಾದ ಬನವಾಸಿಪುರದಲ್ಲಿ ಆಳುತ್ತಿದ್ದ ಮಮಕಾರಪ್ರಭು ಮತ್ತು ಅವನ ಪಟ್ಟಮಹಿಷಿಯಾದ ಮೋಹಿನೀದೇವಿ ಇವರಿಗೆ ಮಗಳಾಗಿ, 'ಮಾಯೆ' ಎಂಬ ಹೆಸರಿನಿಂದ ಜನಿಸಿತು. ಗ್ರಂಥದ ಮಾದರಿಗಾಗಿ ಈ 'ಮಾಯಾದೇವಿಯ ಬಾಲ್ಯವರ್ಣನೆ' ಯ ಕೆಲವು ಪದ್ಯಗಳು ಇಲ್ಲಿ ಉದ್ಧರಿಸಲ್ಪಟ್ಟಿವೆ.

---

ಪ್ರಭುಲಿಂಗಲೀಲೆ.

## ೧೯. ಮಾಯಾದೇವಿಯ ಬಾಲ್ಯವರ್ಣನೆ.

ಭಾಮಿನೀಷಟ್ಪದಿ.

ಅದಟರೊಳವನೀಕಾಂತೆಗೊಪ್ಪುವ ।
ವದನವೋ ಶೃಂಗಾರಸಾರದ ।
ಸದನವೋ ಸೊಬಗಿನ ಸುಮಾನದ ಸುಖದ ನೆಲವೀಡೋ ॥
ಸುದತಿರತ್ನಗಳೊಗೆವ ಚೆಲುವಂ ।
ಬುಧಿಯೊ ಪೇಳಿನೆ ಸಕಲಸಂರಂ ।
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು ॥೧೬೦॥

ಆನಿಕಾಲದಲಾದಡೆಯು ಫಲ ।
ವೀವುತಿಹ ಫಲತೆಱದ ನೇಱಿಲು ।
ಮಾವು ದಾಡಿಮ ತೆಂಗು ನಾರಂಗಾದಿ ತರುಲತೆಯು ॥

ತೀವಿ ಚರಿಸುವ ಶುಕಪಿಕಭ್ರಮ।
ರಾವಳಿಯ ನಾನಾವಿಧದ ಶೋ।
ಭಾವಹವೆ ತಾನಾದುದಾ ಬನವಸೆಯಲುದ್ಯಾನ ॥ ೧೬೧ ॥

ಕೇರಿಕೇರಿಯ ತಳಿರಿಡಿದ ಗುಡಿ।
ತೋರಣಂಗಳ ಪರಿಮಳಿಸುತಿಪ।
ಸಾರಣೆಯ ಕಾರಣೆಯ ಗಂಧೋದಕದ ಚಳಯುಗಳ
ಸೌರಭದ ಪೂವಲಿಗಳಲಿ ಶೃಂ॥
ಗಾರಿಸಿದ ಬೀದಿಗಳ ಸೊಬಗಿನ।
ಸಾರದಲಿ ಸಮನಿಸಿದುದತಿಸಂರಂಭ ಬನವಸೆಯ ॥ ೧೬೨ ॥

ವೇದಶಾಸ್ತ್ರಾಗಮ ಪುರಾಣದ।
ನೋದುವ ಧ್ವನಿಯಿಂದ ಖಳರೊಳು।
ಕಾದಿ ಗೆಲಿವತಿಬಳರ ಕೈವಾರಿಸುವ ದನಿಯಿಂದ॥
ಬೀದಿಬೀದಿಗಳಲ್ಲಿ ವಿಗಡವಿ।
ರೋಧಮದಗಜತತಿಯ ಬೃಂಹಿತ।
ನಾದದಲಿ ಕಳಕಳತೆವೆತ್ತಿದುವಾಗಳಾಪುರವು ॥ ೧೬೩ ॥

ನುಡಿಯ ಜಾಣರು ಸಕಲಬುದ್ಧಿಯ।
ನಡೆಯ ಜಾಣರು ನಿಖಿಲರೀತಿಯ।
ಕೊಡಲು ಜಾಣರು ಕುಂದದಂತಿರಲರ್ಥಿಗರ್ಥವನು॥
ಪೊಡವಿಗಿದು ಪೊಸತೆಂಬ ಜನಪದ।
ವಿಡಿದು ಕಿಕ್ಕಿರಿದಿರುವ ಬನವಸೆ।
ಗೊಡೆಯನಾಗಿರುತಿರ್ದನೈದೆ ಮಧುಕಾರಭೂಪಾಲ ॥ ೧೬೪ ॥

ಆರು ಬಣ್ಣಿಸಬಲ್ಲರಾ ಮದ।
ಕಾರನೃಪನ ಮಹಾಪ್ರತಾಪದ।
ಶೂರತೆಯ ಸಾಹಸದ ನಾನಾಸಕಲಗುಣಗಣವ ॥
ಧಾರಿಣಿಯೊಳಪ್ರತಿಮನಾಗಿಯು।
ದಾರತೆಯೊಳಿರುತಿರ್ದನಾತಗೆ।
ನಾರಿಯಾಗಿರ್ಪ್ಪಳೊಬ್ಬ ಮಾಸಿನಿ ಮೋಹಿನೀದೇವಿ ॥ ೧೬೫ ॥

ಭಾವಿಸಲು ಮಮಕಾರಮೋಹಿನಿ।
ದೇವಿಯರ ಬಸಿಱಿನಲಿ ವರರಾ।
ಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ ॥
ದೇವದಾನವಮಾನವರುಗಳ ।
ಡಾವಣಿಯ ದನವಾಗಿ ಕಟ್ಟುವ ।
ಭಾವೆ ಮಾಯಾದೇವಿ ಜನಿಸಿದಳಖಿಲವಿಭವದಲಿ ॥೧೬೬॥

ಹಲವುಕಾಲಕೆ ಹರಸಿ ಹೆತ್ತರು।
ಲಲಿತಗಾತ್ರೆಯ ವಿಮಲನೇತ್ರೆಯ।
ವಿಲಸಿತವಾ ಮೋಹನವರಸಭರಿತಪಾತ್ರೆಯನು ॥
ಬಳಿಕ ಬುಧರಿಗೆ ಸಕಲರಿಗೆ ಹೊಂ।
ಗಳನು ಭೂಷಣವಸ್ತ್ರರತ್ನವ ।
ನೊಲಿದು ದಾನವ ಮಾಡಿದನು ಮಮಕಾರಭೂಪಾಲ ॥೧೬೭॥

ಸಿಸುವ ನೋಡಿದ ಕಣ್ಣೆ ಮಾಯವೆ।
ಮುಸುಕುವುದು ಮನನುಚಕುವುದು ಮೋ ।
ಹಿಸುವುದೀಪರಿ ಜನನಿಜನಕಾದ್ಯರುಗಳೆಲ್ಲರಿಗೆ ॥
ವಸುಮತೀಪತಿ ಬಳಿಕಲತಿಸಂ ।
ತಸದೊಳಾತ್ಮಜೆಗಖಿಳವಿಭವದಿ ।
ಪೆಸರಿನಿಟ್ಟನು ಮಾಯೆಯೆಂಬ ನವೀನನಾಮವನು ॥೧೬೮॥

ಉಲಿವ ಗೆಜ್ಜೆಯ ಕಾಲ ಕಡಗದ ।
ಘಲಿಘಲಿಸುವಂದುಗೆಯ ರತುನದ ।
ಲುಲಿಯ ಸೂತ್ರದ ಝಣಝಣತ್ಕಾರಿಸುವ ಕಂಕಣದ ॥
ಹುಲಿಯುಗುರ ಬಂದಿಯ ಸುಡಾಳದ ।
ಲೊಲೆವ ನಾಗಾಯಿಗಳ ಪೊಳಪರ ।
ಳಲೆಯ ಮಿಸುಗುವ ಬಾಲದೊಡಿಗೆಯ ಮಾಯೆಗಿಕ್ಕಿದರು ॥೧೬೯॥

ಬೆಚ್ಚು ಸೀರೆಯುಡಿದಿಟ್ಟು ತೊಟ್ಟಿಲೊ ।
ಳೊಚ್ಚೆ ಅಗುದುಗುಲದಲಿ ತನುವನು ।
ಮುಚ್ಚಿ ಸೊಡರ್ಮಕ್ಕಿನಲಿ ಜೊಟ್ಟಿಟ್ಟುಬ್ಬುವಿನಲಿ ಹರಸಿ ॥

ಸಿಚ್ಚದಲಿ ತೂಪಿಟಿದು ತೂಗುವ ।
ನಚ್ಚು ಮೆಚ್ಚಿನ ದಾದಿಯರ್ಗಂ ।
ಪೆಚ್ಚಿಸೀಯುತ ಹೆಚ್ಚುತಿರ್ದಳು ಮೋಹಿನೀದೇವಿ ॥ ೧೩೦ ॥

ಹಲಗೆಮಾಣಿಕದೊಟ್ಟಿಲಲಿ ಮ ।
ಗ್ಗುಲಲಿ ಮಲಗಿ ನಿರೀಕ್ಷಿಸುತ ಮಾ ॥
ರ್ಪೊಳವ ತನ್ನನೆ ಕಂಡು ನಲಿಯುತ ನಗುತ ಕೈಮುಡುಕಿ ॥
ಸೆಳೆದು ತೆಗೆದರೆ ಬಾರದಿರಲಾ ।
ನೆಲನನೊದೆಯುತ ಕಾಲ ಗೆಜ್ಜೆಯು ।
ಗಲುಕನಾಲಿಪ ಮಾಯೆ ಪೊಱೆದಳು ಬಾಲಲೀಲೆಯಲಿ ॥ ೧೩೧ ॥

ಬಪ್ಪ್ರ ಕುಮಕಾರಾಪನೀಶನ ।
ನೊಪ್ಪ್ರ ಮೋಹಿಸಿದೀಪಿಯನು ಮ ।
ತ್ರ್ಯೊಪ್ಪ್ನ ತನ್ನುಪನಾಡಿಸುವ ಕಳದಿಯರ ತಂಡವನು ॥
ಹೆಪ್ಪ್ರಗೊಳಿಸುತ ಸುಖವನುಣಿವ ಹೊಱ ।
ಹೊಪ್ಪ್ರಸುತ ನೆಱೆ ಬಾಲಲೀಲೆಯ ।
ಸೊಪ್ಪ್ರ ಸೂಱೆಯ ಕೊಡುತಲಿರ್ದಳು ಮಾಯೆ ಮೋಹಿಸಿಗೆ ॥ ೧೩೨ ॥

ಬೀಱುತಿರ್ದಳು ಮುದ್ದು ತನವನು ।
ಹೇಱುತಿರ್ದಳು ಸಕಲಚೆಲುವನು ।
ತೋಱುತಿರ್ದಳು ಜಗವ ಜಂಗುಳಿಗಾಡುವಂದವನು ॥
ಸಾಱುತಿರ್ದಳು ಸಕಲಸೊಬಗನು ।
ಮೀಱುತಿರ್ದಳು ದಿನದಿನಕೆ ಕಳ ।
ಯೇಱುತಿರ್ದಳು ಮಾಯೆ ವಿವಿಧವಿಲಾಸವೃತ್ತಿಯಲಿ ॥ ೧೩೩ ॥

ಹಿಡಿಹಿಡಿದುಕೊಂಡಟ್ಟಿಯಲಿ ಬಂ ।
ಬಿಡದೆ ಶಿಕ್ಷಾಚಾರ್ಯತನದಲಿ ।
ಜಡಿದು ಝುಂಕಿಸಿ ಮುದ್ದು ತನ ಮಗೆ ಮಾಯೆ ತನ್ನಂತೆ ॥
ನಡೆಯ ಕಲಿಸಿದಳಂಚೆವಿಂಡಿಗೆ ।
ನುಡಿಯ ಕಲಿಸಿದಳರಗಿಳಿಗೆ ನವ ।
ವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲೆಗೆ ॥ ೧೩೪ ॥

---

## ನಳ ಚರಿತ್ರೆ.

ಪ್ರಸಿದ್ಧನಾದ ನಳಮಹಾರಾಜನ ಪುಣ್ಯಚರಿತ್ರವನ್ನು ಅನೇಕ ಸಂಸ್ಕೃತ ಕವಿಗಳೂ ಕನ್ನಡಕವಿಗಳೂ ಬರೆದಿರುತ್ತಾರೆ. ಈ ಚಕ್ರವರ್ತಿಯ ಕಥೆಯು ಮಹಾಭಾರತ ಮೊದಲಾದ ಇತಿಹಾಸಗಳಲ್ಲಿಯೂ ಹೆಸರುಗೊಂಡಿದೆ. ಕನ್ನಡ ಕವಿಗಳಲ್ಲಿ ಒಬ್ಬನಾದ ಕನಕದಾಸನು ನಳ ಚರಿತ್ರೆಯನ್ನು ಷಟ್ಪದೀಕಾವ್ಯವಾಗಿ ಬರೆದಿದ್ದಾನೆ. ಈ ಕವಿಯು ಬೇಡರಜಾತಿಗೆ ಸೇರಿದವನೆಂದು ಹೇಳುವರು. ಈತನು ರಚಿಸಿರುವ ಮುಖ್ಯ ಗ್ರನ್ಥಗಳಾದ ಮೋಹನತರಂಗಿಣಿ ಎಂಬ ಕೃಷ್ಣ ಚರಿತ್ರೆಯಲ್ಲಿಯೂ ನಳ ಚರಿತ್ರೆಯಲ್ಲಿಯೂ ತನ್ನ ಕುಲದೈವವಾದ ಆದಿಕೇಶವ ಅಥವಾ ಚೆನ್ನಿಗರಾಯ ಸ್ವಾಮಿಯನ್ನು ಬಹಳವಾಗಿ ಸ್ತುತಿಸಿರುವ ಕಾರಣ ಈತನು ವೈಷ್ಣವದಾಸನೆಂಬುದರಲ್ಲಿ ಆವ ಸಂಶಯವೂ ಇಲ್ಲ. ಈತನು ವಾಸವಾಗಿದ್ದ ಊರು ಕಾಗಿನೆಲೆ ಎಂದು ತಿಳಿಯ ಬರುತ್ತದೆ. ಮೋಹನತರಂಗಿಣೀ ಗ್ರನ್ಥವು ಸಾಂಗತ್ಯದಲ್ಲಿ ಬರೆಯಲ್ಪಟ್ಟಿದೆ; ಮುಂದೆ ಪದ್ಯಗಳು ಉದ್ಧೃತವಾಗಿರುವ ನಳಚರಿತ್ರೆಯು ಭಾಮಿನೀಷಟ್ಪದಿಯಲ್ಲಿ ರಚಿತವಾಗಿದೆ. ಈ ಗ್ರನ್ಥಕರ್ತನು ಸುಮಾರು ಕ್ರಿಸ್ತಶಕ ೧೬ನೆಯ ಶತಮಾನದ ಆದಿಭಾಗದಲ್ಲಿ ಜೀವಂತನಾಗಿದ್ದಂತೆ ತೋರುತ್ತದೆ. ಈತನು ಒಂದು ವಿಷ್ಣುಭಕ್ತಿಸಾರವನ್ನು ಬರೆದಿದ್ದಾನೆ.

---

ಭಾಮಿನೀಷಟ್ಪದಿ.

### ೨೦. ನಳರಾಯನೂ ಕಾರ್ಕೋಟಕನೂ.

ಸೂಚನೆ ॥ ಇಂದುವದನೆಯನಗಲಿ ತಾ ಮನ
ನೊಂದು ಕಾರ್ಕೋಟಕನ ದೆಸೆಯಿಂ ।
ಬಂದು ಹೊಕ್ಕನು ನಳನೃಪತಿ ಋತುಪರ್ಣನಗರಿಯನು ॥

ಕೇಳು ಕುಂತೀತನಯ ನಿಷಧನೃ ।
ಪಾಲನಿತ್ತಲು ಮರುಗಿದು ಮಲಗಿದ ।
ಬಾಲೆಯನು ಬಿಟ್ಟಡವಿಯಲಿ ಪೋಪಮಟ್ಟನಾಶ್ರಯವ ॥

ಕಾಲವಾತನ ಕೀಳುಮಾಡಿತು |
ಶೂಲಪಾಣಿಯು ಬಲ್ಲ ನಳಭೂ |
ಪಾಲಕನ ವಿಧಿಯೇನನೆಂಬೆನು ಬಂದನಡವಿಯಲಿ ||೧೩೫||

ವನಿತೆ ಮಲಗಿಹಳೋ ಅಧೈರ್ಯದಿ |
ನೆನೆವಳೋ ದೈವವನು ಮನದಲಿ |
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ ||
ಕನಲಿ ವಿಧಿಯನು ಬಯ್ವಳೋ ಕಂ |
ಬನಿಯ ಸುರಿವಳೊ ಶೋಕದಲಿ ನಿಜ |
ತನುವ ಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದ ||೧೩೬||

ಸುತರ ಪರರಡೆಗಿತ್ತು ನಂಬಿದ |
ಸತಿಯ ತಂದಡವಿಯಲಿ ಮಲಗಿಸಿ |
ಮತಿವಿಕಳನಾದೆನು ಪುರಾಕೃತಕರ್ಮಫಲವೈಸೆ ||
ಕ್ಷಿತಿಯೊಳಾರುಣ್ಟೆನ್ನವೊಲು ನಿಜ |
ಸತಿಗೆ ತಪ್ಪಿದ ಬಾಹಿರರು ಎಂ |
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ ||೧೩೭||

ಲೋಕದೊಳಗಗ್ಗಳಿಯ ಮಹಿಪರ |
ನೇಕರವರೊಳಗಾರನೊಲ್ಲದೆ |
ನೂಕಿ ತನ್ನನೆ ಒಲಿದು ಕೈಕೊಂಡಳು ಸರೋಜಮುಖಿ ||
ಆಕೆಯಗಲಿದ ಪಾತಕನು ತಾ |
ನೇಕೆ ಧರೆಯೊಳು ಶಿವಶಿವಾಯೆಂ |
ದಾಕಮಲಲೋಚನನೆಗೆ ಮಣಿಗಿದನರಸ ಕೇಳೆಂದ ||೧೩೮||

ಈಪರಿಯೊಳತಿಶೋಕದಿಂದ ಪ್ರ |
ಲಾಪಿಸುತಲಾನೃಪತಿ ಹೆಚ್ಚಿದ |
ತಾಪದಲಿ ಕಡುನೊಂದು ಬಳಲಿದ ತನ್ನ ಮನದೊಳಗೆ ||
ಶ್ರೀಪತಿಯ ನೆನೆಯುತ್ತ ಹೃದಯದ |
ತಾಪದೊಳು ಬರುತಿರಲು ಮುಂದೆ ಸ |
ಮೀಪದೊಳು ಹುತವಹನ ಮಹಿಮೆಯ ಕಣ್ಡನವನೀಶ ||೧೩೯||

ಬಿದಿರಮೆಳೆ ಧಗಧಗಿಸೆ ಘನಹೆ |
ಬ್ಬಿದಿರು ಛಟಛಟಯೆನಲು ಉರಿಯೊಳು |
ಕದಳಿಗಳು ಸಿಮಿಸಿಮಿಸಿ ತರುಗಳನುರುಹಿ ಮೆಳೆಗಳೊಳು ||
ಗವಗದಿಸೆ ಗುಹೆಗಳಲಿ ಮೃಗತತಿ |
ಬೆದಱಿ ಹಾಯ್ದುವು ಪಕ್ಷಿಸಂಕುಲ |
ಮುದುರಿದುವು ಗರಿಸಹಿತ ಬೆಂದಾವನದ ಮಧ್ಯದಲಿ ||೧೪೦||

ತೆಗೆದು ಹಾಯ್ದುವು ಸಿಂಹಶಾರ್ದೂ |
ಲಗಳು ಕರಿಗಳ ಹಿಂಡು ನಾನಾ |
ಮೃಗಗಳಗಣಿತ ಬೆಂದು ಬಿದ್ದುವು ನಿಮಿಷಮಾತ್ರದಲಿ ||
ಚಿಗಿದು ಹಾಯ್ದುಱೆ ಗಂಡಭೇರುಂ |
ಡಗಳು ಮೊದಲಾದಖಿಳಮೃಗಪ |
ಕ್ಷಿಗಳು ಕೆಡೆದುವು ಕಿಚ್ಚಿನೊಳಗವನೀಶ ಕೇಳೆಂದ ||೧೪೧||

ಪ್ರಳಯದಿನದಲಿ ಸುಳಿವ ಬಡಬಾ |
ನಲನ ಪರಿಯಿಂ ವನವ ಸುಡುತಲಿ |
ಸುಳಿಸುಳಿಯುತಾಹಾರಗೊಳುತಿರಲಲ್ಲಿ ದನಿಯಾಯ್ತು ||
ಸಿಲುಕಿದೆನು ಪಾವಕನೊಳೆನ್ನನು |
ಪೊಲಿದು ಹಾನೃಪಕುಲಶಿರೋಮಣಿ |
ಕಳೆದು ಬಿಡಿಸೈ ಸುಕೃತ ನಿನಗಹುದೆಂದುದಾ ನಿನದ ||೧೪೨||

ಆಗಲಾವನಿಗೇಳಿ ನೃಪತಿ ಸ |
ರಾಗದಿಂದಲೆ ಬಂದು ಹೊಕ್ಕನು |
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ ||
ಹೋಗುತಿದೆಯೆನ್ನಸುವು ಸಲಹು ಷ |
ಡಾಗಮಜ್ಞ ನೃಪಾಲ ಎನಲಾ |
ಭೋಗಿಯನು ಕಂಡರಸ ನೀನಾರೆಂದು ಬೆಸಗೊಂಡ ||೧೪೩||

ಉರಗಪತಿ ಕಾರ್ಕೋಟನು ನಾ |
ನರಸಕೇಳೈ ಬನದೊಳಿರುತಿರೆ |
ಪರಮಋಷಿ ಬಂದೆನ್ನ ತಾಗಿದನಂದು ಖಾತಿಯಲಿ ||

ಕರೆದು ಕೊಟ್ಟನು ಶಾಪವನು ಸಂ ।
ಚರಿಸವಂಕಿರೆಯೆನಗೆಯಿದು ಪರಿ ।
ಹರವದೆಂದಿಗೆ ಮುನಿಪ ಕರುಣಿಪುದೆಂದೊಡಿಂತೆಂದ ॥೧೮೪॥

ಇರಲಿರಲು ಕಾಲಾಂತರಕೆ ಭೂ ।
ವರನು ನಳನೃಪನಿಲ್ಲಿಗೆಯ್ದುವ ।
ಧರಣಿಪನ ಕರಕಮಲ ಸೋಂಕಲು ಶಾಪವಿದು ಬಳಿಕ ॥
ಪರಿಹರಿಪುದೆನೆ ಮುನಿಯ ವಚನದಿ ।
ಬರವ ಹಾರೈಸಿದೆನು ಬಂದ್ಯೈ ।
ಕರುಣದಿಂದಗ್ನಿಯನು ಪರಿಹರಿಸೆಂದನುರಗಪತಿ ॥೧೮೫॥

ಕರುಣದಲಿ ನೃಪ ಭೀತಿಗೊಳ್ಳದೆ ।
ಯುರಗಪತಿಯನು ತೆಗೆಯುತನಲನ ।
ಉರಿಯ ತಪ್ಪಿಸಿ ತಂದು ಸರಸಿಯ ತಡಿಯೊಳುಪಚರಿಸೆ ॥
ಕರವಿಡಿದು ಧರಣಿಪನ ಕಚ್ಚಿದೊ ।
ಡುರವಣಿಸಿ ವಿಷವೇರ್ದು ನೃಪತಿಯ ।
ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ ॥೧೮೬॥

ಅಡ್ಡಮೋರೆಯ ಗಂಟುಮೂಗಿನ ।
ಜಡ್ಡುದೇಹದ ಗುಜ್ಜುಗೊರಲಿನ ।
ದೊಡ್ಡ ಕೈಕಾಲುಗಳ ಉದುರಿದ ರೋಮಮೀಸೆಗಳ ॥
ದೊಡ್ಡಹೊಟ್ಟೆಯ ಗೂನುಬೆನ್ನಿನ ।
ಗಿಡ್ಡರೂಪಿನ ಪಡಿಕುಗಡ್ಡದ ।
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥೧೮೭॥

ಮಾರನಾಕಾರದ ನೃಪಾಲಕ ।
ಕ್ರೂರರೂಪಾದನು ಪುರಾಕೃತ ।
ಮೀರಲಾರಳವಂದು ನುಡಿದನು ತನ್ನ ಮನದೊಳಗೆ ॥
ತೋರಮಾಣಿಕವೆಂದು ಪಿಡಿದರೆ ।
ಭೂರಿಕೆಂಡವಿದಾಯ್ತು ಹರಹರ ।
ಕ್ರೂರಜಂತುಗಳೊಡನೆ ಸಖಿತನ ಫಲಿಸಿತೆನಗೆಂದ ॥೧೮೮॥

ಮೊನ್ನ ಮಾಡಿದ ಕರ್ಮಫಲವಿದು ।
ಬೆನ್ನ ಬಿಡುವುದೆ ಉರಗಪತಿ ಕೇ ।
ಳಿನ್ನು ನೋಯಲೇಕೆ ತಾನೇ ಪಾಪಿಯಾದೆನಲಾ ॥
ಪನ್ನಗಾರಿಧ್ವಜನ ಕೃಪೆ ತನ ।
ಗಿನ್ನು ತಪ್ಪಿದಬಳಿಕ ಲೋಕದೊ ॥
ಳಿನ್ನು ಸೈರಿಸಲಾರವಶವೆಂದೆನುತ ಮುಳುಗಿದನು ॥೧೪೯॥

ಏಕೆ ನೃಪತಿ ವೃಥಾ ಮನೋವ್ಯಥೆ ।
ಕಾಕ ಬಳಸಲು ಬೇಡ ನೀವಿದ ।
ವೇಕೆಯೇ ಸಾಕಿನ್ನು ನಿನಗುಪಕಾರವೆಂಜದಿರು ।
ಲೋಕ ನಿನ್ನನು ಕಾಣದಂತಿರ ।
ಬೇಕೆನುತಲೇಳಿಸಿದೆ ಗರಳವ ।
ನೇಕವುಪಕಾರಂಗಳಹವದರಿಂದ ನಿನಗೆಂದ ॥೧೫೦॥

ಜನಪ ಕೇಳ್ಯ ಧರೆಗೆ ಋತುಪ ।
ರ್ಣನು ಮಹಾರಾಜೇಂದ್ರ ಗುಣನಿಧಿ ।
ಯಿನಕುಲಾಂಬುಧಿಚಂದ್ರನಾತನ ಪುರವಯೋಧ್ಯೆಯದು ॥
ನಿನಗೆ ಬಹುದಕ್ಷನ ಹೃದಯವಾ ।
ತನಲಿ ನೀನವಗಶ್ವಹೃದಯವ ।
ನನುಗೊಳಿಸು ಸಾಕಿನ್ನು ಚಿಂತಿಸಬೇಡ ಹೋಗೆಂದ ॥೧೫೧॥

ಪೊಡವಿಪನನೋಲೈಸು ತುರಗವ ।
ಪಿಡಿದು ಬಾಹುಕನೆಂಬ ನಾಮದಿ ।
ನಡೆಸು ರಥವನು ಹೀನವೃತ್ತಿಯದಲ್ಲ ನಿನಗಿನ್ನು ॥
ಬಿಡದು ಮುನ್ನಿನ ರೂಪು ಬೇಕಾ ।
ದೊಡೆ ನೆನೆವುದಾಪಕ್ಷಿಗಳ ಪ ।
ಚ್ಚಡವನೀವುವು ಧರಿಸಲಡಗುವುದೀ ಕುರೂಪಿತನ ॥ ॥೧೫೨॥

ಪರಮಸತ್ಯವ್ರತನೆ ಕೇಳ್ ಪು ।
ಷ್ಕರನ ಗೆಲಿದುನ್ನತದ ರಾಜ್ಯದ ।
ಸಿರಿಸಹಿತ ಸಾಮ್ರಾಜ್ಯವಾಳುವೆ ನಿನ್ನ ಸತಿಸಹಿತ ॥

ವರವನಿತ್ತನು ಸಿನಗೆಯೊಂದುಪ ।
ಚರಿಸಿ ಕಾರ್ಕೋಟಕನು ನಳನೃಪ ।
ಗಱುಹುತಾಕ್ಷಣ ಮಾಯವಾದನು ರಾಯ ಕೇಳೆಂದ ॥೧೩॥

ಹರಿವ ನದಿಗಳ ವನತಟಾಕವ ।
ವರಕುಸುಮ ಮಲ್ಲಿಗೆಯ ಬನಗಳ ।
ಪುರದ ಪ್ರಾಂತದೊಳೆಸೆವ ಕೆಂದಾವರೆಯ ಕೊಳಗಳನು ॥
ಉರುತರದ ಮಂಟಪಗಳಿಂಪುಱೆ ।
ಮೆಱೆವ ರಾಜ್ಯವ ಕಳೆದು ಮುಂಪಕೆ ।
ಬರುತಯೋಧ್ಯಾಪುರವ ಕಂಡನು ನೃಪತಿ ಕೇಳೆಂದ ॥೧೪॥

ಬಂದು ಹೊಕ್ಕನು ಪುರವ ಮೆಱೆವತಿ ।
ಚೆಂದವನು ನೆಱೆ ನೋಡೆ ಮನದೊಳ ।
ಗಂದು ಕೊಂಡಾಡಿದನು ಋತುಪರ್ಣನ ಮಹಾಸಿರಿಯ ॥
ತಂದುದೇ ವಿಧಿ ತನ್ನಸಿಲ್ಲಿಗೆ ।
ಮಂದಭಾಗ್ಯನು ತಾನೆನುತ ಮನ ?
ನೊಂದು ನೆನೆದನು ವರಪುರಾಧಿಪ ಚನ್ನಕೇಶವನ ॥೧೫॥

---

## ಕನ್ನಡ ಭಾರತ.

ಕನ್ನಡಕಾವ್ಯಗಳನ್ನು ವಿಶೇಷವಾಗಿ ಮೊದಲು ಬರೆದು ಪ್ರಚಾರಕ್ಕೆ ತಂದವರು ಜೈನರಷ್ಟೆ. ಅವರನ್ನು ಹಿಂಬಾಲಿಸಿದ ಲಿಂಗವಂತಕವಿಗಳೂ, ಬ್ರಾಹ್ಮಣಕವಿಗಳೂ ಅನೇಕವಾದ ಕನ್ನಡ ಗ್ರಂಥಗಳನ್ನು ಬರೆದು ಹೆಸರುಗೊಂಡಿದ್ದಾರೆ. ಕ್ರಿಸ್ತಶಕ ಹದಿನಾರನೆಯ ಶತಮಾನದಲ್ಲಿ ಬ್ರಾಹ್ಮಣಕವಿಯಾದ ನಾರಣಪ್ಪನು ಸಂಸ್ಕೃತ ಮಹಾಭಾರತವನ್ನು ಕನ್ನಡಿಸಿದನು. ಈತನು ಮೊದಲಿನ ಹತ್ತು ಪರ್ವಗಳನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿರುವನು. ಈತನಿಗೆ ಧಾರ್ವಾಡಡಿಸ್ಟ್ರಿಕ್ಟಿನ ಕೋಳಿವಾಳ ಗ್ರಾಮದ ಗೌಡಿಕೆ ಇದ್ದಿತು. ಈತನ ಕುಲದೈವವು ಅದೇ ಡಿಸ್ಟ್ರಿಕ್ಟಿನಲ್ಲಿರುವ ಗದುಗಿನ ವೀರನಾರಾಯಣಸ್ವಾಮಿ. ೧೫೦೮–

೧೫೩೦ ರ ವರೆಗೂ ವಿಜಯನಗರದ ಸಂಸ್ಥಾನವನ್ನು ಆಳುತಿದ್ದ ಕೃಷ್ಣರಾಯನೆಂಬ ಧೊರೆಯ ಪಟ್ಟಾಭಿಷೇಕ ಕಾಲದಲ್ಲಿ ಈ ಗ್ರಂಥವು ಬರೆದಹಾಗೆ ತೋರುವುದು. ನವರಸಾಲಂಕಾರಭರಿತವಾಗಿಯೂ ಬಳ್ಳಿಯ ಶೈಲಿಯಿಂದ ಅಲಂಕೃತವಾಗಿಯೂ ಕನ್ನಡ ವಾಗ್ಸರಿಯ ವಿಷಯದಲ್ಲಿ ಅದ್ವಿತೀಯವಾಗಿಯೂ ಇರುವ ಈ ಗ್ರಂಥವನ್ನು ಕನ್ನಡಿಗರೆಲ್ಲರೂ ಕೊಂಡಾಡುವರು. ಬ್ರಾಹ್ಮಣಕವಿಗಳ ಗ್ರಂಥಗಳಲ್ಲಿ ಇದೂ ಒಂದು ಮುಖ್ಯಗ್ರಂಥವೆಂದು ತೋರುತ್ತದೆ. ಈ ಕವಿಯು ತನ್ನ ರಚನೆಯ ಪಾಂಡಿತ್ಯಕ್ಕಾಗಿ ತನ್ನನ್ನು "ಕುಮಾರವ್ಯಾಸ" ನೆಂದು ಹೊಗಳಿಕೊಳ್ಳುವನು. ಶ್ರೀಮಹಾಭಾರತವನ್ನು ರಚಿಸಿದ ವ್ಯಾಸಮಹರ್ಷಿಗೆ ಈತನು ಎರಡನೆಯವನಂತೆ ಗ್ರಂಥರಚನೆಯಲ್ಲಿ ಹೆಸರುಗೊಂಡಿರುವ ಕಾರಣ ಈತನಿಗೂ ಆ ಬಿರುದು ಬಂದಿರಬಹುದು.

---

ಭಾರತ-ಆದಿಪರ್ವ.

## ೨೧. ದ್ರೌಪದೀ ಸ್ವಯಂವರ.

ಸೂಚನೆ ॥ ರಾಯಸಭೆ ನಗಲೈದಿ ಯಂತ್ರದ ।
ವಾಯುವನು ನೆಱೆ ಗೆಲಿದು ನಿರ್ಜರ ।
ರಾಯನಂದನ ಕಾದಿ ಗೆಲಿದನು ಸಕಲರಿಪುನೃಪರ ॥

ಕೇಳು ಜನಮೇಜಯಧರಿತ್ರೀ,
ಪಾಲ ಪಾಂಚಾಲಿಯ ಮನೋರಥ ।
ಶಾಲೆಯಲಿ ಸೇರಿದರೆಲೈ ಸಭೆಯಲಿ ಮಹೀಸುರರ ॥
ಏಳಿ ಭುಜಬಲವುಳ್ಳವರು ಬಿ ।
ಪ್ರಾಳಿಯಲಿ ಬಿಲುವಿಡಿದು ಯಂತ್ರದಿ ।
ಕೋಲುಗಳ ಕೇವಣಿಪುದೆಂದರು ಹೊಯ್ದು ಡಂಗುರವ ॥೧೯॥

ಎಂದು ಸಾರಿದ ದನಿಯನಾದ್ವಿಜ ।
ವೃಂದವಾಲಿಸಿ ಸಮಗಿದೇಕರ ।
ವೆಂದವಿದನೆಯ ತೊಡಕು ತೆಗೆ ನಾವಾರು ಧನುವಾರು ॥

ಬಂದ ದಕ್ಷಿಣೆ ಮೃಷ್ಟಭೋಜನ ।
ದಿಂದ ತುಷ್ಟರು ನಾವು ನಮಗಿದ ।
ಱಿಂದ ಬಹ ದುಷ್ಕೀರ್ತಿ ಬರಲೆಂದುದು ಬುಧವ್ರಾತ ॥೧೯೭॥

ವಚನಶೂರರು ನಾವು ಪಾರ್ಥಿವ ।
ನಿಚಯವೇ ಭುಜಶೂರರನಿಬರ ।
ನಚಲಧನು ಭಂಗಿಸಿತು ನಮಗೀವಿದ್ಯೆ ವೈದಿಕವೇ ॥
ಉಚಿತವಲ್ಲಿದು ನಮ್ಮ ಸಾಹಸ ।
ರಚನೆಯನು ನೋಡುವೊಡೆ ಪಂಡಿತ ।
ನಿಚಯವಿದಿರಲಿ ನಿಲಲಿ ತೋಱುವೆವಲ್ಲಿ ವಿಸ್ಮಯವ ॥೧೯೮॥

ಭರತದಲಿ ವೈದ್ಯದಲಿ ಕಾವ್ಯಸು ।
ವಿರಚಿತಾಲಂಕಾರದಲಿ ಗಜ ।
ತುರಗಲಕ್ಷಣದಲಿ ಸಮಾಹಿತಮಂತ್ರತಂತ್ರದಲಿ ॥
ಸರಸಕವಿತಾರಚನೆಯಲಿ ವಿ ।
ಸ್ತರದುಪನ್ಯಾಸದಲಿ ಭೂಪತಿ ।
ಕರೆಸಿ ನೋಡಲಿ ನಮ್ಮನೆಂದರು ದ್ವಿಜರು ತಮತಮಗೆ ॥೧೯೯॥

ಅಲ್ಲದಿರ್ದರೆ ಸೋದಿಸಿದ ತನಿ ।
ಬೆಲ್ಲವಿಕ್ಕಿದ ಪೂರಿಗೆಯ ಮೆದೆ ।
ಯಲ್ಲಿ ಪರಡಿಯ ಸೇವಿಗೆಯ ಪರಿಪರಿಯ ಪಾಯಸದ ॥
ಪುಲ್ಲಿಗೆಯ ತತ್ಸವಿಯ ಮಂಡಿಗೆ ।
ಯಲ್ಲಿ ನವಘೃತಸೂಪದಂಶಕ ।
ದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುನಿಕರ ॥೨೦೦॥

ರಸದ ಹೊರಲೇಪದಲಿ ಹುದುಗಿದ ।
ಮಿಸುನಿಯಂತಿರೆ ಜೀವಭಾವ ॥
ಪ್ರಸರದೊಳಗವಲಂಬಿಸಿದ ಪರಮಾತ್ಮನಂದದಲಿ ।
ಎಸೆವ ವಿಪ್ರಾಕಾರದಲಿ ರಂ ।
ಜಿಸುವ ಭೂಪತಿ ತತ್ಸಭಾಸ ।
ದ್ವಿಸರಮಧ್ಯದೊಳಿರ್ದು ಕೇಳಿದನೀ ಮಹಾಧ್ವನಿಯ ॥೨೦೧॥

ನೋಡಿದನು ತಮ್ಮನನು ಸನ್ನೆಯ |
ಮಾಡಿದೊಡೆ ಕೈಕೊಂಡನವನಿಪ |
ಗೂಡಿ ಕುಂತಿಗೆ ಭೀಮಸೇನಂಗೆಱಗಿ ಮನದೊಳಗೆ ||
ಕೂಡೆ ಕುಳ್ಳಿರ್ದಖಿಲವಿಪ್ರರ |
ನೋಡಿಪೊಲ್ಲನೆ ಧೋತ್ರ ದರ್ಭೆಯ |
ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ ||೧೦೨||

ಏನು ಸಿದ್ಧಿಯುಪಾಧ್ಯರೆದ್ದಿರಿ |
ದೇನು ಧನುವಿಂಗಲ್ಲಲೇ ತಾ |
ನೇನು ಮನಸಂಘವಣೆ ಬಯಸಿದಿರೇನು ಕಾಮಿನಿಯ ||
ವೈನತೇಯನ ಮಿಗಡಿಸಿದ ವಿಷ |
ವೇನು ಸದರವೊ ಹಾವಡಿಗರಿಗೆ |
ದೇನು ನಿಮ್ಮುತ್ಸಾಹವೆಂದುದು ಧೂರ್ತವಟುನಿಕರ ||೧೦೩||

ಮದುವೆ ಬೇಕೇ ಶ್ರೋತ್ರಿಯಸ್ತ್ರೀ |
ಯರಲಿ ಕನ್ಯಾರ್ಥಿಗಳು ನಾವಂ
ಬುದು ನಿಜಾನ್ವಯವಿದ್ಯೆಯಲಿ ಕೊಡುವುದು ಪರೀಕ್ಷೆಗಳ ||
ಮದುವೆಯಹುದಿದು ಸೌಖ್ಯಪುಣ್ಯಾ |
ಪ್ರದವು ಭೂದೇವರಿಗೆ ನೀಂ ನೆನೆ |
ದುದು ಭಗೀರಥಯತ್ನವೆಂದುದು ಭೂಸುರವ್ರಾತ ||೧೦೪||

ನೀವು ಸೈರಿಸಿ ನಿಮ್ಮ ಕಾರು |
ಣ್ಯಾವಲೋಕನವುಂಟಲೇ ಸ |
ದ್ಭಾವದಲಿ ನೀಂ ರಚಿಸಿದಾಶೀರ್ವಾದಶಕ್ತಿಯಲಿ ||
ನಾವು ವಿಜಯರು ಚಾಪಯಂತ್ರವಿ |
ದಾವ ಘನವೆಂದರ್ಜುನನ ಸಂ ||
ಭಾವನೋಕ್ತಿಗೆ ನಿಲ್ಲದವರೊದಱಿದರು| ತಮತಮಗೆ ||೧೦೫||
ಕೆಲರು ಹೋಗದಿರೆಂದು ಜಱೆದರು |
ಕೆಲರು ತಾನೇ ಬಲ್ಲನೆಂದರು |
ಕೆಲರು ನುಡಿದರು ವಿಪ್ರಸಭೆಗಪಹಾಸ್ಯವಹುದೆಂದು ||

ಕೆಲರು ತಪ್ಪೇನೆಂದು ಕಳೆದರು।
ಕೆಲರು ಭದ್ರಾಕಾರನೀತಂ।
ಗಳುಕುವುದು ಧನು ಭಾಗ್ಯಮುಖನೆಂದುದು ಬುಧಸ್ತೋಮ ॥೨೦೬॥

ತೊಟ್ಟ ಹೊಸಯಜ್ಞೋಪವೀತದ।
ಮುಟ್ಟ ನೊಸಲಲಿ ಕುಶೆಯ ಕರಡಿಗೆ।
ಕಟ್ಟಿಯಿರುಕಿದ ಕಕ್ಷೆ ಬೊಳಲಿ ಮುಖಿದ ದರ್ಭೆಗಳ॥
ಉಟ್ಟ ಬಾಸರ ಬಳಲಗಚ್ಚೆಯ।
ಅಟ್ಟಹಾಸದ ಜನದ ನಗೆಗಳ।
ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ ॥೨೦೭॥

ಧನು ತನಗೆ ನೆಗಹಲ್ಕೆ ಕೃಷ್ಣಾ।
ಜಿನವೊ ಸಾಲಗ್ರಾಮದೇವರೊ॥
ವಿನುತ ತುಳಸಿಯೊ ಕುಶವೊ ದರ್ಭೆಯೊ ಸಮಿಧೆಗಳ ಹೊರೆಯೊ॥
ನೆನೆದ ತಿಲವೋ ಮಣಿದೀಪಾ।
ಸನದ ಕೊಳವಿಯೊ ಬಡಗುವಿಪ್ರನ।
ನೆನಹ ನೋಡಿರೆ ಘನವಲಾ ದ್ರೌಪದಿಯ ಸೌಭಾಗ್ಯ ॥೨೦೮॥

ಇತ್ತನೋಡೌ ತಾಯೆ ಹಾರುವ।
ರತ್ತ ಗಡ್ಡದುಪಾಧರನು ತಾ।
ವೆತ್ತುವರು ಗಡ ಧನುವ ನಿಸುಪರು ಗಡ ತಿಮಿಂಗಿಲವ॥
ಹೊತ್ತುಗಳವೊಡೆ ಲೇಸು ಬಳಿಕಿ।
ನ್ನುತ್ತಮರಲಾ ವಿಪ್ರರೆನೆ ತಲೆ!
ಗುತ್ತಿನಾಚಿದಳಂಗುಟದೊಳೌಂಕುತ ಮಹೀತಳವ ॥೨೦೯॥

ಅವನಿಪತಿ ಕೇಳತ್ತಲೀ ಪಾ।
ರ್ಥಿವರ ಪರಿಹಾಸವನು ಕಾಂತಾ।
ನಿವಹದಲಿ ನಿಬ್ಬರದ ನುಡಿಗಳ ನಾಮಹೀಸುರರ॥
ವಿವಿಧಕಟುಮಧುರೋಕ್ತಿವಿನ್ಯಾ।
ಸವನು ಕೇಳುತ ಮುಗುಳುನಗೆಯಲಿ।
ನವಮದದ್ವಿಪಗತಿಯ ಗುರುವಾಯಿಯಲಿ ನಡೆತಂದ ॥೨೧೦॥

ಹೊಯ್ದು ತಿರುವನು ಸೆಳೆದು ಕಿವಿವರೆ ।
ಗೊಯ್ದನಿದು ಹದವಿಲ್ಲಲಾ ಬಲ: ।
ಹಾಯ್ದುದಕಟಾ ಬಱಿದೆ ಹೆದರಿತು ಮಾಗಧಾದಿಗಳು ॥
ಕಯ್ದುಗೆವರಿದರೊಳಗೆ ಹೆಸರೆನ ।
ಗೆಯ್ದ ಬೇಕೆಂದೈಸಲೇ ಏನು ।
ತಯ್ದು ಬಾಣವ ಕೊಂಡು ಯಂತ್ರದ ಹೊಳವ ನೀಕ್ಷಿಸಿದ ॥೨೧೧॥

ತೂಗಿ ಕಿವಿವರೆಗುಗಿದು ಯಂತ್ರದ ॥
ತಾಗಿಸಿದನಂಬಿನಲಿ ಪಾರ್ಥನ ।
ಲಾಗುವೇಗವನಾರು ಬಲ್ಲರು ಯಂತ್ರಭೇದದಲಿ ॥
ಜಾಗು ! ಧಣು ! ಧಣು ! ಪೂತು ! ಕಾರ್ಮುಕ ।
ಯೋಗಸಿದ್ಧನೆ ! ಧುರ್ಝುರೆ ! ಶೋಣಂ ।
ಡಾಗಮತ್ರಿಪುರಾರಿಯೆಂದುದು ವಂದಿಸಂದೋಹ ॥೨೧೨॥

ಆಯೆನುತ ಬೊಬ್ಬಿರಿದು ವಿಪ್ರಸಿ ।
ಕಾಯ ಕುಣಿದುದು ಕಮಲಮುಖಿ ಸಿ
ದರ್ಗಾಯುದಲಿ ಸೇರಿದಳು ಹಾರುವಗೆನುತ ಹರ್ಷದಲಿ ॥
ಆಯುವತಿಜನಜಲಧಿ ಮಸಗಿತು ।
ಬಾಯ ಮೌನದ ಬೆರಳ ಮೂಗಿನ ।
ರಾಯರಿದ್ದರು ಬಿಗಿದ ಬೆಱಗಿನ ಹೊತ್ತ ಮುಗುಡದಲಿ ॥೨೧೩॥

ಮೊಳಗಿದುವು ನಿಸ್ಸಾಳತತಿ ಹೆ ।
ಕ್ಕಳದ ಪೆರ್ಚಿನೊಳಲ್ಲಿ ದಿವಿಜಾ ।
ವಳಿಯ ದುಂದುಭಿರವದಲುಬ್ಬಿದ ಸಾಧುವಾದಗಳು ॥
ನಳಿನಮುಖಿ ಪಂಡಿಗೆಯೊಳ್ರತಂ ।
ದಿಳಿದಳೀತನ ಹೊರೆಯೊಳಾಗಳೆ ।
ಕಳಕಳದೊಳೊಳತೋಟಿ ಮುಸಗಿತು ಹರುಷಲಜ್ಜೆಯಲಿ ॥ ॥೨೧೪॥

ಲಲಿತಮಧುರಾಪಾಂಗದಲಿ ಮು ।
ಕ್ಕುಳಿಸಿ ತಣಿಯುವು ಕಂಗಳುಬ್ಬಿದ ।
ಪ್ಪುಳಕಜಲದಲಿ ಮುಳುಗಿ ಮೂಡಿತು ವ್ಯೈ ಸಿತಂಬಿನಿಯು

ತರುಣಿ ನಿಜತನುಪರಿಮಳದೊಳುಱೆ ।
ಹೊರೆದ ಹೂವಿನ ದಂಡೆಯನು ನಿಜ ।
ವರನ ಕೊರಳಲಿ ಹಾಕಿದಳು ಜಯವೆನೆ ಸುರಸ್ತೋಮ ॥ ॥೨೧೬॥

## ತೊರವೆರಾಮಾಯಣ.

ಬೊಂಬಾಯಿ ಅಧಿಪತ್ಯಕ್ಕೆ ಸೇರಿರುವ ಸೊಲ್ಲಾಪುರ ಡಿಸ್ಟ್ರಿಕ್ಟಿನ "ತೊರವೆ" ಎಂಬ ಊರಿನಲ್ಲಿದ್ದ ಬ್ರಾಹ್ಮಣಕವಿಯೊಬ್ಬನು ಸುಮಾರು ಕ್ರಿಸ್ತಾಬ್ದ ೧೫೯೦ರಲ್ಲಿ ವಾಲ್ಮೀಕಿರಾಮಾಯಣವನ್ನು ಕನ್ನಡಿಸಿದನು. ಆ ತೊರವೆಯಲ್ಲಿರುವ ತನ್ನ ಕುಲದೈವವಾದ ನರಸಿಂಹದೇವರ ಅಙ್ಕಿತದಲ್ಲಿ ಈತನು ತನ್ನ ಗ್ರಂಥವನ್ನು ರಚಿಸಿದನಾದುದರಿಂದ ಈ ಗ್ರಂಥಕ್ಕೆ "ತೊರವೆ ರಾಮಾಯಣ" ಎಂಬ ಹೆಸರು. ಈ ಗ್ರಂಥ ಕರ್ತೃವಿಗೆ "ಕುಮಾರ ವಾಲ್ಮೀಕಿ" ಎಂಬ ಬಿರುದಿದೆ. ಇದರ ಶೈಲಿಯು ಚೆನ್ನಾಗಿರುವುದಲ್ಲದೆ ಗ್ರಂಥವು ರಸಭರಿತವಾಗಿಯೂ ಶ್ರಾವ್ಯವಾಗಿಯೂ ಇದೆ. ಇದು ಭಾಮಿನೀಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಗ್ರಂಥದ ಮಾದರಿಗಾಗಿ ರಾಮನು ವನವಾಸಕ್ಕಾಗಿ ಅಯೋಧ್ಯೆಯನ್ನು ಬಿಟ್ಟು ಹೊರಡುವ ಕಥೆಯು ಇಲ್ಲಿ ಉದ್ಧೃತವಾಗಿದೆ.

ಭಾಮಿನೀಷಟ್ಪದಿ.

### ೨೨. ಶ್ರೀರಾಮನು ವನವಾಸಕ್ಕಾಗಿ ಅಯೋಧ್ಯೆಯನ್ನು ಬಿಟ್ಟು ಹೊರಡುವಿಕೆ.

ಕುಶನೆ ಕೇಳ್ ಪಟ್ಟಾಭಿಷೇಕದ ।
ವಸತಿ ಶೃಂಗಾರಿಸಿತು ನೆಱೆದುವು ।
ಹೊಸಪರಿಯ ನೃಪಲಾಂಛನಾದಿಸಮಸ್ತವಸ್ತುಚಯ ॥

ಬಸಗೆ ತತ್ಪುರವರವನವಲಂ ।
ಬಿಸಿತು ನಿಮಿಷದಲಾಸುಮಂತ್ರನ ।
ದಶರಥನ ಬಳಿಗಟ್ಟಿ ರಾಮನ ಬಳಿಗೆ ಮುನಿಬಂದ ॥೨೧೪॥

ಬಂದಮುನಿಪನ ಭಕ್ತಿಪೂರ್ವಕ ।
ದಿಂದ ಸತ್ಕರಿಸಿದನೆಲ್ಲೈ ರಘು ।
ನಂದನನು ವಿಧಿವಿಹಿತಗುರುಪೂಜಾವಿಧಾನದಲಿ ॥
ಎಂದನಾಮುನಿಪತಿಗೆ ಕಂಡೆನಿ ।
ದೊಂದು ಕನಸನು ಕಾನನದೊಳರ ।
ವಿಂದಮುಖಿಸಹಿತೆಮಗೆ ಸಂಭವಿಸಿತು ಪರಿಭ್ರಮಣ ॥೨೧೬॥

ಕಂಗೆಟಿದೆನನಿತಱಲಿ ಮನಕಿದು ।
ಚೆಂದವಾಗಿರದೇನು ನೀವೇ ।
ನೆಂದು ಕಂಡಿರಿ ರಾಜ್ಯಸಂಪದದಾಗಮಸ್ಥಿತಿಗೆ ।
ಮುಂದೆನಲು ಮುನಿನಾಥ ಮಗುಳಿಂ ।
ತೆಂದನಾಯುಸ ತೋಱು ಬೞಿಕ ಪು ।
ರಂದರನ ವೈಭವದ ಸರಿಸಿರಿಯಹುದು ನಿನಗೆಂದ ॥೨೧೭॥

ನಿಮ್ಮ ಕರುಣಾ ಕಟಾಕ್ಷ ರಕ್ಷಣೆ ।
ಯೆಮ್ಮ ಮೇಲಿರಲಾವದುರ್ಘಟ ।
ವೆಮ್ಮ ಮಾಡುವುದೇನು ನಾಂ ಸಿದ್ಧೈಸುವರೇ ಎನುತ ॥
ಬೊಮ್ಮ ಕೋಟಿಕಿರೀಟಮಂಡಿತ ।
ನಿರ್ಮಳಾಂಘ್ರಿನಖಪ್ರಭಾಕರ ।
ನುಮ್ಮಪದೊಳೆಱಗಿದನು ನರರವೊಲಾ ಮುನೀಂದ್ರಂಗೆ ॥೨೧೮॥

ಅರಸನಾಗಧರಾಜನಾಗು ।
ರ್ವರೆಗೆ ಪತಿಯಾಗಖಿಳಸೂನೃತ ।
ಚರಿತನಾಗರಿವಿಜಯನಾಗು ಸಮಸ್ತಸುಜನರಿಗೆ ॥
ಸುರಮಹೀರುಹನಾಗು ಲಕ್ಷ್ಮೀ ।
ವರನವೊಲು ಸಾದ್ಗುಣ್ಯಸಕಲೈ ।
ಶ್ವರಿಯಯುತನಾಗೆಂದು ಮುನಿ ಹರಸಿದನು ಹರುಷದಲಿ ॥೨೧೯॥

ಬಿಸರುಹಪ್ರಿಯಕುಲದ ಮುನಿ ಪಾ|
ನಸಸರೋವರರಾಜಹಂಸನ |
ನೊಸೆದು ಮಂಗಳಮಜ್ಜನವ ಮಾಡಿಸಿದನಾಮುನಿಪ ॥
ಬಸಗೆವೆಱೆ ಝಲ್ಲೈಸೆ ನೂತನ |
ವಸನದಿವ್ಯವಿಭೂಷಣಂಗಳೊ |
ಳೆಸೆದನೈ ಮೂರ್ಧಾಭಿಷೇಕದ ರಾಜತೇಜದಲಿ ॥೨೦॥

ಮಾಡಿದನು ಮನದಣಿಯೆ ದಕ್ಷಿಣೆ |
ಗೂಡಿ ಕನ್ಯಾಧೇನುದಾನವ |
ನಾಡಲೇನದನವನಿಯುಮರರ ಸಿರಿಯು ಸಡಗರವ ॥
ಝಾಡಿವೆಳಗಿನಲಾರತಿಗಳೆಡೆ |
ಯಾಡಿದುವು ಕಳಕಳಿಕೆ ಮಿಗೆ ಮುಂ |
ಡಾಡಿದುವು ಕಂಬಿಗಳು ಕಂಚುಕಿಜನದ ಕೈಗಳಲಿ ॥೨೧॥

ಕ್ಷಿತಿಯ ವಿಬುಧರ ವಿಮಲಮಂತ್ರಾ |
ಕ್ಷತೆಯ ಕೈಕೊಳುತಡರಿದನು ನಿಜ |
ಸತಿಸಹಿತ ಹೊಂಗದ್ದುಗೆಯ ಹೊಂಬೆಸೆದ ಱೆಂಚೆಯದ ॥
ರತುನ ಲಹರಿಯುಲಳಿಯ ಭದ್ರಾ |
ಯತಮತಂಗಜಕಂಧರದಿ ಮುನಿ |
ಪತಿಯನುಜ್ಞೆಯಲಖಿಳತೂರ್ಯತ್ರಯದ ರಭಸದಲಿ ॥೨೨॥

ಬಳಸಿದುದು ನರಪಾಲತತಿ ಹೆ |
ಕ್ಕಳಿಸಿದುದು ಚತುರಂಗಬಲವೆಡ |
ಬಲವಲುಗ್ಗಡಿಸಿದರು ಕೈವಾರಿಗಳು ಬಿರುದುಗಳ ॥
ನಿಳಯ ನಿಳಯದ ನಳಿನಮುಖಿಯರ |
ಹೊಳೆವ ರತ್ನಾವಳಿಯ ದೀಪಾ |
ವಳಿಯ ಸಂಭ್ರಮದಿಂದ ಬಂದನು ರಾಜಬೀದಿಯಲಿ ॥೨೩॥

ತಳಿತಪಲ್ಲವ ಪಲ್ಲವವಸು |
ಜ್ಜ್ವಳಿಪ ಹರ್ಮ್ಯಾಳಿಗಳು ಚಿತ್ರಾ |
ಚ್ಚಲಸಾರಾಸಾವಳಿಯ ಶಿಖಿಶುಕಪಿಕವ್ರಜದ ॥

ಉಲಹು ವಿಪಿನವಿಹಂಗಮದ ಕ |
ಟ್ಟುಲುಹ ಸೂಚಿಸುತಿರ್ದುದೈ ವೆಽ |
ವಿಳಸವಭಿನವರಾಜ್ಯದವಿಯುನವನಿಜಾಪತಿಗೆ ||೧೦೪||

ಕವಡಿದಂತಃಕರಣಗಳ ಗದ |
ಗದಿತಕಂಠದ ಕಂಬನಿಯಲಿ |
ದ್ದುದು ಸಮಸ್ತಚಮೂಪಸಚಿವನಿಯೋಗಿಬಂಧುಜನ ||
ಇದಿರುವೆಂದು ಸುಮಂತ್ರಸಿಳಗಿಳು |
ಹಿದನು ಮದಕರಿಯಿಂದ ಮುಂಚುವಿನ |
ಮುದದ ಹೊಳವೆಶ್ರುಗಳ ಸಂತಾಪದಲಿ ರಘುಪತಿಯು ||೧೦೫||

ತೆವರಿದೊದ್ದೆಯು ಹೊಗಿಸಬೇಡುಳಿ |
ದವರನೆಂದೊಳಹೊಗುತ ನೇಮವ |
ನವಸರದ ಸೇವಕರಿಗಿತ್ತು ವಸಿಷ್ಠ ಮುನಿಸಹಿತ ||
ಅವನಿತನುಜಾಪತಿಗೆ ಕೈಗೊ |
ಟ್ಟವನಿಪನ ಬಳಿಗಾಗಿ ಕೈಕೆಯು |
ಭವನದತ್ತಲು ತಿರುಗಿದನು ಮಂತ್ರೀಶ ದುಗುಡದಲಿ ||೧೦೬||

ಯುವತಿಯರ ಗುಜುಗುಜಿನ ಶೂನ್ಯೋ |
ತ್ಸವದ ನೃಪಮಂದಿರವ ಜಾಡ್ಯದ |
ಜವಸಿಕೆಯ ಜಂಜಡವ ಕಾಣುತ ನುಡಿದನಿಂತೆಂದು ||
ಅವನಿಪಮಗೆಯಸಾಧ್ಯವೆಂಬೀ |
ವ್ಯವಹರಣೆ ಗೋಚರಿಸುತಿದೆ ಸಂ|
ಭವಿಸಲುತ್ತರವೆಂದನಾರಘುಪತಿ ಸುಮಂತ್ರಂಗೆ ||೧೦೭||

ಹೃದಯ ಕಳವಳಿಸಿದುದು ಕಂಗಳ |
ಹೊದಿಸಿದುವು ನಯನಾಂಬು ಮಬುಮಾ |
ತುದಿಸದೊಯ್ಯನೆ ಬಾಗಿದನು ಮಂತ್ರೀಶ ಮಸ್ತಕವ ||
ಬೆದಱಿದನು ರಘುಪತಿ ಸುಮಂತ್ರನ |
ವದನಚೇಷ್ಟೆಯ ಕಂಡು ತಂದೆಯ |
ಪದನದೇನೆಂದರಸನಿದ್ದೆಡೆಗಾಗಿ ನಡೆತಂದ ||೧೦೮||

ವಿತತಗಳಿತಾಶ್ರುಪ್ರಕರಪೂ ।
ರಿತನಿಮೀಲಿತನೇತ್ರನಿರ್ಗತ ।
ಗತವಚೋವಿಹ್ವಲನ ಶೋಕೋದ್ರೇಕಪರವಶವ ॥
ಸತಿಯ ಕರ್ಕಶಕಲುಷವಾಗಸಿ ।
ಹತಿನಿರೋಧಿತಹೃದಯಬಾಧಾ ।
ನ್ವಿತನ ಕಾಣುತ ಕೈಯ ಕದಪಿನಲಿರ್ದನಾರಾಮ ॥೨೯॥

ಆ ಸಮಯದಲಿ ಮನಮಱುಗಿ ಮಂ ।
ತ್ರೀಶನೊಯ್ಯನೆ ರಾಜರಾಜಾ ।
ಧೀಶನನು ನುಡಿಸಿದನು ಮಧುರವಚೋವಿಳಾಸದಲಿ ॥
ಈ ಸುನಿರ್ಬಂಧದ ನಿರೋಧ ।
ಕ್ಲೇಶವಾರಿಂದೇನುಕಾರಣ ।
ವಾಸವಾದುದು ದೇವರಂಗದಲೆಂದನಾಮಂತ್ರಿ ॥೩೦॥

ತರಣಿವಂಶದ ಸಾರ್ವಭೌಮರಿ ।
ಗೆರವಲಾ ದುಶ್ಛಿತ್ತ ಮನುಕುಲ ।
ದರಸುಗಳಿಗೆ ವಿಷಾದವದು ತಾನಪ್ರಸಿದ್ಧವಲೆ ॥
ಅರಿವಿಜಯವೀರರಿಗೆ ಚಿಂತಾ ।
ಸ್ಪರುಶವುಂಟೇ ಜೀಯ ಯೋಗೋ
ತ್ಕರುಷದೇಹವ್ಯಥೆಯದೇಕೆಂದಾತ ಬೆಸಗೊಂಡ ॥೩೧॥

ಆ ಮಧುರವಚನವ ವಿಳಾಸೋ ।
ದ್ಧಾಮಗಾರುಡಮಂತ್ರವೆಬ್ಬಿಸಿ ।
ತಾಮಹಾದುಷ್ಟಾಂಗಸಾರಸನಾಹಿದಷ್ಟನನು ॥
ರಾಮನೇ ಬಂದಾತ ಜಗದಭಿ ।
ರಾಮನೇ ನುಡಿವಾತ ಮಂಗಳ ।
ನಾಮನೇ ಎಂದಪ್ಪಿದನು ಮಗನೆಂದು ದಳಪತಿಯ ॥೩೨॥

ಜೀಯ ನಾನು ಸುಮಂತ್ರಕನು ರಘು ।
ರಾಯನಭಿಷೇಚನದ ರಾಜ್ಯ ।
ಶ್ರೀಯ ಪರಿಣಯಕಾವುದಭಿಮತ ನಿಮ್ಮ ಚಿತ್ತದಲಿ ॥

ರಾಯತನದಭಿಮುಖದ ಕಮಲದ |
ಛಾಯ ತಾಂಬಕ ಬಂದಿಹನು ಮುನಿ |
ರಾಯನೈತಂದಿಹನು ನೇಮವದೇನು ತನಗೆಂದ ||೭೩||

ಮಗನೆ ಬಂದೈ ಮನುಕುಲಾಂಬರ |
ಗಗನಮಣಿ ಬಂದೈ ಮನೋರಥ |
ಸುಗುಣ ಬಂದೈ ಸೂನೃತವ್ರತ ಬಂದೆಯೈ ಎನುತ ||
ಬಗುವ ನಯನೋದಕದಲರೆದಿ |
ಟ್ಟೃಗಳ ನೋಟದಲಪ್ಪಿ ಸತ್ಯದ |
ತಗಹಿನವನೀನಾಥನಾರಘುನಾಥಗಿಂತೆಂದ ||೭೪||

ಕಂದ ಕೇಳೆನ್ನಣುಗ ಕೇಳಾ |
ನೊಂದ ನೆನೆದರೆ ದೈವ ತಾ ಬೇ |
ಱೊಂದ ನೆನೆದುದು ದೈವಗತಿಗೀಕ್ಕೈಕೆಯನುಸಾರಿ ||
ಎಂತು ಮೇಲುತ್ತರಕೆ ನಾಲಗೆ |
ಬಂದು ಬಂದೊಳಸರಿದು ಮೆಲ್ಲನೆ |
ನಿಂದು ಬಳಿಕೀಮಾತನೆಂದನು ಕಲಿಸುಮಂತ್ರಂಗೆ ||೭೫||

ಈಸುದಿನಪರಿಯಂತ ವಿಭವದ |
ವಾಸ ಸೊಬಗಿನ ಸೆಜೆ ಸುಖದ ಸು |
ದೇಶ ಸುಮ್ಮಾನದ ಸುಧಾಂಬುಧಿ ಸಿರಿಯ ನೆಲೆವೀಡು ||
ಲೇಸಿಗಾಗರ ಶುಭದ ಬಹಳತ |
ಕೋಶ ಸಂತಸದಿಕ್ಕೆ ಸೊಂಪಿನ |
ವಾಸವಾಗಿರ್ದುದು ನಿವಾಸವಿದೆಂದನಾ ಭೂಪ | ||೭೬||

ಅಶುಭದಾಡುಂಬೊಲನು ಕುಹಕದ |
ಪಸರ ಚಿಂತೆಯ ಸಂತೆ ದುಃಖದ |
ವಸತಿ ದುಗುಡದ ಬೀಡು ದುಮ್ಮಾನದ ಜನಸ್ಥಾನ ||
ಅಸುಖದಾರವೆ ಭೇದ ಪುದಿದಾ |
ಯಸದ ಜಾಳಿಗೆ ಜವನ ಮನೆ ರ
ಕ್ಕಸಿಯ ಮಠವಾಯ್ತೆಂದು ಭವನವಿದೆಂದನಾಭೂಪ ||೭೭||

ನರಪತಿಗಳೊಳು ಭಾಗ್ಯದಲಿ ಬಾ ।
ಹಿರರಲಾ ನಾವಿಂದು ಸುಕೃತದೊ ।
ಳರೆಗೆಲಸಿಗಳು ನಾವಲೇ ಹರಹರ ಮಹಾದೇವಾ ॥
ಪರಮಹರುಷದ್ರುಮದ ಬೇರಿಂ ।
ಗುರಿಯನುಱೆ ಬಾಚಿದೆವಲಾ ಕಡು ।
ದುರಿತಕಾಯರು ನಾವಲೇ ಎಂದನು ಮಹೀಪಾಲ ॥೨೩೮॥

ಹೇಳಿ ಫಲವೇನೆಲೆ ಸುಮಂತ್ರಕ ।
ಮೇಲನಱಿಯದೆ ಕೊಟ್ಟೆನೀಘಾ ।
ತಾಳಿಗಸುರಾಮರರ ಸಂಗ್ರಾಮದಲಿ ವರವೆರಡ ॥
ಬಾಳ ಬಾಚಿದಳಿವಳನಗೆ ಗೋ ।
ನಾಳಿಗೊಡ್ಡಿದ ಬಂದು ತಂದೀ ।
ನಾಲಗೆಗೆ ನರಸುಕ್ಕನಿಕ್ಕಿದಳಿವಳು ತನಗೆಂದ ॥೨೩೯॥

ಬಟ್ಟೆಗುತ್ತರವಿದ್ಯವಱಿಯದೆ ।
ಕೊಟ್ಟರುಂಟೆಲೆ ಮಂತ್ರಿಕೇಳ್ ಮನ ।
ಮುಟ್ಟಿ ನುಡಿಯಲಿ ಭಾವಿಸದೆ ಸದ್ಧರ್ಮಮಾರ್ಗದಲಿ ॥
ಕೊಟ್ಟವರವೆರಡುಂಟು ಬೇಡದೆ ।
ಕೊಟ್ಟರವರಿಂದೀಗ ಹೊದಕುಳ ।
ಗುಟ್ಟುತಿಪರಿದನಱಿಯೆ ನೀಕೇಳೆಂದಳಾ ಕೈಕೆ ॥೨೪೦॥

ಬಂದುದೆನಗಪಕೀರ್ತಿ ರಾಜ್ಯವ ।
ನೊಂದುವರದಲಿ ಬೇಡಿದೆನು ನಿಜ ।
ನಂದನಂಗೊಂದರಲಿ ರಾಮಂಗಡವಿಯೊಡೆತನವ ॥
ಇಂದುಮುಖಿಯರ ಸಾಕ್ಷಿಯಲಿ ಮೊದ ।
ಲೊಂದಿಸಿದರೆನಗೀವರವ ನೀಂ ।
ಬಂದ ಬಳಿಕನುಮಾನವಾಗಿದೆ ನಿಮ್ಮರಾಯರಿಗೆ ॥೨೪೧॥

ಮನುಕುಲದ ರಾಯರಲಿ ಹುಸಿ ಸಂ ।
ಜನಿಸದೆಂದೊಳಗಱಿಯದೆನ್ನಯ ।
ತನುಜಗಧಿರಾಜತ್ವವವನು ಬೇಡಿದೆನು ನಿಮ್ಮವರ ॥

ಇನಿತು ಸತ್ಯಕೆ ಮರಳದಲೆಯಿರ ।
ಲಿನಿತು ದೊಡ್ಡತೆ ಸಾಕು ರಘುಸಂ ।
ದನೆಗೆ ಪಟ್ಟವ ಕಟ್ಟು ನೀಂ ನರಹೆಂದಳಾ ಕೈಕೆ ॥೧೪೧॥

ಈತನೇನು ದಧೀಚಿ ಶಿಬಿ ಜೀ ।
ಮೂತವಾಹನ ಬಲಿ ಕಪೋತಾ ।
ಖ್ಯಾತರೊಳಗಗ್ಗಳನೆ ಬೇಡಿದ ವರವನೀಯಲ್ಕೆ ॥
ಮಾತದೇಕೆಲೆ ಮಂತ್ರಿ ಸಾಕಿ ।
ನ್ನೇತಕವನಿಯ ಬಯಕೆ ರಘು ಸಂ ।
ಜಾತಗಭಿಷೇಕವನು ಮಾಡಲಿಕೆಬ್ಬಿಸವನಿಪನ ॥೧೪೨॥

ದೊಡ್ಡತೇ ಕ್ಷತ್ರಿಯರಿಗೀಕಡು ।
ಖಡ್ಡತನವಿರಬೇಕು ರಾಮಂ ।
ಗೊಡ್ಡವೇಕವಡೊಂದ ತಪ್ಪಿಸಿ ನೆನೆದ ಮತಿ ಲೇಸು ॥
ಜೊಡ್ಡದೂದಪಕೀರ್ತಿವಧು ಸಲೆ ।
ದೊಡ್ಡವರು ರಘುಸಗರರವರೊಳ ।
ಗಡ್ಡೆನಗೆ ಹೊಗದಂತೆ ಮಾಡುವುದುಚಿತ ನಿಮಗಿಂದು ॥೧೪೪॥

ಸುತವಿಯೋಗದಲಳಿಯದಿರಸೀ ।
ಕ್ಷಿತಿಪ ನೀವೆಂದುಗ್ರಪಾತಿ ।
ವ್ರತಿಯರೊಳಗಗ್ಗಳರು ನಿಮ್ಮನು ನೆಮ್ಮುಗಪಕೀರ್ತಿ ॥
ಕ್ಷಿತಿಯ ಕುಜನರ ಜಿಹ್ವೆ ಕಡುಕೂ ।
ರಿತು ಕದರ್ಥದಿಸವನಿಪಾಲ ।
ಚ್ಯುತಿಗೆ ಮನವನು ಮಾಡುವುದು ನಿಮಗುಚಿತವಲ್ಲೆಂದ ॥೧೪೫॥

ಇರಲಿ ನಿಮ್ಮ ಕುಮಾರನೀಧರೆ ।
ಯರಸುತನದಲಿ ರಾಘವೇಶ್ವರ ।
ನಿರಲಿ ಭೂಸುರನಾಗಿ ರಾಜಋಷಿತ್ವದಲಿ ಬಳಿಕ ॥
ಇರಲಿ ರಘುಪತಿ ನಿಮಗೆ ಮೆಱೆವುದು ।
ಧರೆಯ ಸಿರಿ ಮನ್ವಾದಿರಾಯರ ।
ತರುಣಿಯರು ನಗದಂತೆ ಮಾಡುವುದುಚಿತ ನಿಮಗೆಂದ ॥೧೪೬॥

ಬೇಡಿದೀವರದಿಂದ ನೃಪತಿಯು ।
ಕೂಡಿಕೊಂಡು ವನಪ್ರವಾಸವ ।
ಮಾಡುವೆನು ಮಱೆಯೇನು ಮನದನುತಾಪವಿನ್ನೇಕೆ ॥
ಖೋಡಿ ನಿನಗಾಗದವೊಲೀ ನೃಪ ।
ನಾಡಿ ಹುಸಿ ಹೋಗದಂತೆ ಕೀರ್ತಿಯು ।
ಜೋಡಿಸುವಡಿದು ಸಮಯವೆಂದು ಸುಮಂತ್ರ ಕೈಮುಗಿದ ॥೧೪೭॥

ಬಿಡು ಸುಮಂತ್ರ ಕುಮಂತ್ರಕೃತ್ಯವ ।
ನಡಿಸಬೇಡೆಮ್ಮೊಡನೆ ರಘುಗಳ ।
ಮಡದಿಯರು ನಗಲೆಮ್ಮ ಡೆಮ್ಮಲಿಯಾದ ದುಷ್ಕೀರ್ತಿ ॥
ಒಡರಿಸಲಿ ಪುನರುಕ್ತಿ ನಮ್ಮಯು ।
ನುಡಿಗೆ ಹೋಗದಾಂ ಬಲ್ಲೆವೀ ಜಂ ।
ಜಡೆಯತನವನು ಕೆಲಕೆ ಸಾರೆಂದಳು ಸುಮಂತ್ರಕನ ॥೧೪೮॥

ಇದು ಯಥಾರ್ಥ ಸುಮಂತ್ರ ನೀನಾ ।
ಡಿದ ಸುಭಾಷಿತವೆಂದು ನಂಬಿಹು ।
ವದಕೆ ಹೊರಹೋಗದಂತೆ ನಡಿಸುವೆವೆಂದು ಮುನಿ ನುಡಿಯೆ ॥
ಗದಿಸಬೇಡಿನ್ನಾತನಾಡಿದ ।
ತುದಿಯ ಕೊಸರನು ನಿಮ್ಮ ರಾಯನ ।
ವದನದಲಿ ನುಡಿ ಹುಟ್ಟಲೆಂದಳು ಕೈಕೆ ಮುನಿಪತಿಗೆ ॥೧೪೯॥

ಐಸಲೇ ನೀಂ ಬೇಡಿದುದು ತಾ ।
ನೇಸು ದೊಡ್ಡಿತು ತಂದೆಯಾಡಿದ ।
ಭಾಷೆಗಿದಕೋ ಭಾಷೆಯೆನುತಾಜನನಿಗಾರಾಮ ॥
ಲೇಸು ಮಾಡಿದಿರನೃತವೆಮ್ಮವ ।
ನೀಶನಲಿ ಹೋಗದಂತೆ ಘಟದಲಿ ।
ಕಾಸಿದಿರಿ ಕಲ್ಮಷವನುಗಿದನ್ವಯದ ಭೂಷಣವ ॥೧೫೦॥

ಭರತನಾಳಲಿ ರಾಜ್ಯವನು ನೀಂ ।
ನರಪತಿಯು ಚರಣಾರವಿಂದದ ।
ಪರಮಸೇವಾನಿರತರಾಗಿರಿ ನಿಮ್ಮನುಜ್ಞೆಯಲಿ ॥

ಚರಿಸುವೆನು ವನವಾಸವನು ಗೋ ।
ಚರಿಸುವೆನು ನೀಂ ನುಡಿದ ವರುಷದ ।
ಪರಿಗಣನಪರಿಯಂತವೆಂದನು ಕೈಕೆಗಾರಾಮ ॥೩೧॥

ಆ ಸತಿಯನುಪಚರಿಸಿ ಪಿತನಾ ।
ಯಾಸವನು ಶ್ರುತಿಧರ್ಮಶಾಸ್ತ್ರ ಪ ।
ಳಾಸವಚನಾಳಾಪದಿಂದನುತಾಪವನು ಬಿಡಿಸಿ ॥
ಆ ಸಕಲಲೋಕೈಕಲೀಲಾ ।
ವಾಸ ತೊರವಯ ರಾಯನಾ ವನ ।
ವಾಸವನು ಕೈಕೊಂಡನಮರೇಂದ್ರಾದಿಗಳು ನಲಿಯೆ ॥೩೨॥

---

## ಕನ್ನಡಭಾಗವತ.

ಕನ್ನಡ ಭಾಷೆಯಲ್ಲಿ ರಾಮಾಯಣ ಮಹಾಭಾರತ ಗ್ರಂಥಗಳು ರಚಿಸಲ್ಪಟ್ಟ ಹಾಗೆಯೇ ಶ್ರೀ ಭಾಗವತವೂ ಕೂಡ 'ನಿತ್ಯಾತ್ಮಶುಕ' ಎಂಬ ಬಿರುದುಳ್ಳ ಕವಿಯಿಂದ ಭಾಮಿನೀಷಟ್ಪದಿಯ ರೂಪವಾಗಿ ಬರೆಯಲ್ಪಟ್ಟದೆ. ಸುಮಾರು ಕ್ರಿಸ್ತಾಬ್ಧ ೧೫೯೦ ರಲ್ಲಿ ಈ ಗ್ರಂಥವು ರಚಿತವಾದಂತೆ ತಿಳಿಯಬರುವುದು. ಈ ಗ್ರಂಥಕರ್ತೃವಿನ ನಿಜವಾದ ಹೆಸರು ಚಾಟುವಿಟ್ಠಲನಾಥ.

ಭಾಮಿನೀಷಟ್ಪದಿ.

### ೨೩ ಸ್ಯಮಂತಕೋಪಾಖ್ಯಾನ.

ಸೂ॥ ಹೊತ್ತ ದುರಿತವ ಪರಿಹರಿಸಲೆಂ ।
ದಿತ್ತನಾಸತ್ರಾಜಿತಾಖ್ಯನು ।
ಸತ್ಯಭಾಮಾದೇವಿಯನು ನಿತ್ಯಾತ್ಮಕಂಗೊಲಿದು ॥

ಅರಸ ಕೇಳಾದ್ವಾರಕಾಪುರ ।
ವರದಲಾಸತ್ರಾಜಿತಾಖ್ಯನು ।
ತರಣಿಯನು ಭಜಿಸಿದನು ತತ್ತ್ವದ ಭಾವಭಕುತಿಯಲಿ ॥
ಕರುಣಿಸಿದನಾತಂಗೆ ರತ್ನವ ।
ನಿರದೆ ನಿಜಭಕ್ತಂಗೆ ಬಳಿಕಾ ।
ಪರಮಗುಣನಿಧಿ ಬಂದನಂದಾದ್ವಾರಕಾಪುರಕೆ ॥೨೩॥

ತರಣಿ ತನಗಿತ್ತಮಲರತ್ನವ ।
ನಿರದೆ ಕೊರಳಲಿ ಧರಿಸಿಕೊಂಡಂ ।
ಬುರುಹಮಿತ್ರನ ಭಕುತ ಸತ್ರಾಜಿತನು ಪುರವರಕೆ ॥
ಬರುತಿರಲು ಪುರವಾಸಿಜನ ಕ ।
ಣ್ಡಿರದೆ ನೋಡುವೆವೆನುತ ಹರಿತಂ ।
ದಿರದೆ ಬಿನ್ನಹಮಾಡಿದರು ಕೃಷ್ಣಂಗೆ ಕೈಮುಗಿದು ॥೧೧೪॥

ದೇವ ದೇವರ ಚರಣಕಮಲಯು ।
ಗಾವಲೋಕನಕಿಂದಿದೋ ರಾ ।
ಜೀವಸಖನಿದೆ ಬಂದನೀಕ್ಷಿಸುವವರ ದೃಷ್ಟಿಗಳು ॥
ಸೀವುತಿವೆ ರಕ್ಷಿಸುವುದಧಿಕಕ ।
ಪಾವಲೋಕನದಿಂದೆನಲು ರಾ ।
ಜೀವನಾಭನು ನೋಡಿ ನಗುತಿಂತೆಂದನವರೊಡನೆ ॥೧೧೫॥

ಕಂಜಸಖನಲ್ಲಲ್ಲ ಬೆದರದಿ ।
ರಂಜದಿರಿಯಂಜದಿರಿ ಬಿಸಿದೇ ।
ಗುಂಜೆ ಮಾಣಿಕವೆಂಬ ಮರುಳುಗಳಂತೆ ಮತಿಗೆಟ್ಟು ॥
ಅಂಜದಿರಿ ಸತ್ರಾಜಿತನು ವರ ।
ಕಂಜಸಖನಿತ್ತಮಳರತ್ನ ಸು ।
ರಂಜಿತನು ಬರುತಿಹನು ಎಂದನು ನಗುತ ಮುರವೈರಿ ॥೧೧೬॥

ಎನುತಿರಲು ಮಧುವೈರಿ ತನ್ನಯ ।
ಮನೆಯ ಹೊಕ್ಕನು ಮಣಿರಥನು ಸಂ ।
ಜನಿಸಿದನು ಧನವಂತನಾದನು ಪೂಜಿಸುತ್ತಿರಲು ॥
ದಿನದಿನದಲೆಂಟೆಂಟು ಭಾರದ ।
ಕನಕವನು ಮಣಿ ಕೊಡುವುದವರೊಳು ।
ಜನಿಸದಾಧಿವ್ಯಾಧಿದುರ್ಭಿಕ್ಷಾದಿಭಯವೆಂಬ ॥೧೧೭॥

ಒಂದು ದಿನ ತದ್ರತ್ನವನು ಗೋ ।
ವಿಂದನಾಸತ್ರಾಜಿತನ ಕರೆ ।
ದೆಂದನೀವುದು ಯದುನೃಪಾಲಂಗೆಂದೊಡೆಯು ಕೊಡದೆ ॥

ಮಂದಮತಿ ಧನಲೋಭದಲಿ ನಿಜ ।
ಮಂದಿರದಲೇ ಪೂಜಿಸುತ್ತ ಮು ।
ಕುಂದನಾಜ್ಞೆಯ ಮೀಱಿ ಲೆಕ್ಕಿಸದಿರ್ದನುಬ್ಬಿನಲಿ ॥೨೪೮॥

ಇರಲು ಸತ್ರಾಜಿತನ ತಮ್ಮನು ।
ಧರಿಸಿ ಮಣಿಯನು ಹೋದನಡವಿಗೆ ।
ತುರಗದಲಿ ಮೃಗಯಾವಿಹಾರವಿನೋದದಿಂದಿರಲು ॥
ಕೆರಳಿ ಕೊಂದುದು ಸಿಂಹವಾಕೇ ।
ಸರಿಯ ಕೊಂದನು ಜಾಂಬವನು ಬಳಿ ।
ಕರಸಕೇಳಾ ಮಣಿಸಹಿತ ಹೊಕ್ಕನು ಮಹಾಬಿಲವ ॥೨೪೯॥

ಅತ್ತಲಱಸಿದರಾಪ್ರಸೇನನ ।
ತೆತ್ತಿಗರು ಸತ್ರಾಜಿತಾದ್ಯರು ।
ಸತ್ತ ತಮ್ಮನ ಕಂಡು ಕೃಷ್ಣಮೇಲೆ ಶಂಕಿಸಲು ॥
ಇತ್ತಲಾ ವಾರ್ತೆಯನು ನಿರ್ಮಳ ।
ಮೂರ್ತಿ ಕೇಳಿದ ತನ್ನ ಮೇಲಣ ।
ಹೊತ್ತ ವಿಲಗವೆ ಕಳೆಯಲಸುರಾಂತಕನು ಪೊಱಮಟ್ಟ ॥೨೫೦॥

ಅಱಸಿ ಮುರಹರನಾಪ್ರಸೇನನ ।
ಮರಣ ಸಿಂಹದಲಾದುದನು ಕಂ ।
ಡಿರದೆ ಬೆಂಬತ್ತಿದನು ಸಿಂಹದ ಹಜ್ಜೆಯನು ಬಿಡದೇ ॥
ಉರವಣಿಸಿ ಸಿಂಹವದು ವಿಪಿನಂ ।
ತರದಲಡೆಗೆಡದಿರಲು ಕಂಡೆನು ।
ಕರಡಿಯುಗುರಿನ ಗಾಯದಲಿ ಬೆಱಗಾದನಸುರಾರಿ ॥೨೫೧॥

ಸಿಂಹವನು ಕೊಲುವಂತ ಕರಡಿಯು ।
ಸಿಂಹವಿಕ್ರಮವೆಂತೆನುತ ನರ ।
ಸಿಂಹನೈದಿದನದಱ ಹಜ್ಜೆಗೆ ಹಜೆಯನು ನಿಲಿಸಿ ॥
ಗಹ್ವರವನಪವಾದಶಿಖಿದಂ ।
ದಹ್ಯಮಾನಾಂತರನು ಹೊಕ್ಕನ ।
ಸಹ್ಯತಾಪತ್ರಯವಿದೂರನು ಋಕ್ಷಪನ ಬಿಲವ ॥೨೫೨॥

ನಿಂದನವನ ಸಮೀಪದಲಿ ಗೋ ।
ವಿಂದನಾ ರತ್ನಾಭಿಲಾಷೆಗೆ ।
ಸಂದು ಸುಳಿಯುತ್ತಿರಲು ಕಂಡಾಧಾತ್ರಿ ಮುರಹರನ ॥
ಬಂದನಾರಿವನೆನುತ ಮೊರೆಯಿಡ ।
ಲಂದದನು ಕೇಳುತ್ತ ಪಿಗೆ ಹರಿ ।
ತಂದನಾಋಕ್ಷಾಧಿಪತಿಜಾಂಬವನು ಕಡು ಮುಳಿದು ॥೧೬೩॥

ಅಱಿಯದಾತ್ಮ ಸ್ವಾಮಿಯೆಂಬುದ ।
ನೆಱೆ ವಿಚಾರವಿಹೀನನಾಗಿಯೆ ।
ತಱುಬಿ ಕಾದಿದನಾಯುಧಂಗಳಸ್ತ್ರಶಸ್ತ್ರದಲಿ ॥
ಮುಱಿದು ತರುನಿಕರದಲಿ ಮತ್ತೆಯು ।
ಕರದ ಮುಷ್ಟಿಯಲೊಬ್ಬರೊಬ್ಬರು ।
ಜಱೆದು ಮೂದಲಿಸುತ್ತ ಮುರರಿಪು ಋಕ್ಷಪತಿ ಮುಳಿದು ॥೧೬೪॥

ಮುಷ್ಟಿಯುದ್ಧವ ಮಾಡುತಿರಲಂ ।
ದಷ್ಟವಿಂಶತಿದಿವಸ ಪರಿಯಂ ।
ತಿಷ್ಟಭಕ್ತನ ಕೂಡೆ ಲೀಲೆಯನಾಡುವಂದದಲಿ ॥
ನಷ್ಟವಾದುದು ಸತ್ವವಾತನ ।
ರಿಷ್ಟವೈರಿಯು ಕರಹತಿಗೆ ನಿ ।
ಷ್ಪಿಷ್ಟಗಾತ್ರನು ಜಾಂಬವಂತನು ಬಳಲುತಿಂತೆಂದ ॥೧೬೫॥

ಆರು ನೀನೆಲೆ ವೀರ ಜೀವರ ।
ಭೂರಿಸತ್ವಾತ್ಮಕನು ಕೌಸ್ತುಭ ।
ಧಾರಿಯೋ ಶಂಕರನೊ ಮೇಣ್ ಸರಸೀರುಹೋದ್ಭವನೋ ॥
ಆರು ತನ್ನೊಡನಕಟ ಕಾದುವ ।
ವೀರರೀಯುಗದೊಳಗೆ ವಿಸ್ಮಯ ।
ಕಾರಿಯಾದೆಯಲಾಯೆನುತ ನೋಡಿದನು ಮನದೊಳಗೆ ॥೧೬೬॥

ಮತ್ತೆ ಹರಿ ಕರುಣಿಸಲು ಕಂಡನು ।
ಚಿತ್ತದಲಿ ರಘುನಾಥನೆಂಬುದ ।
ನತ್ಯಧಿಕಭಕ್ತಿಯಲಿ ಮೆಯ್ಯಿಕ್ಕಿದನು ಚರಣದಲಿ ॥

ಸತ್ಯಸಂಧನೆ ತನಗೆ ಮೆಱವೆಯು ।
ನಿತ್ತಿನಿತುದಿನ ಕಾದಿದೆಯೆನು ।
ತ್ತೆತ್ತನಾಜಾಂಬವನು ಕೃಷ್ಣನ ಕಾಲ್ಗಳನು ಪಿಡಿದು ॥೧೬೭॥

ಏಳಸುತ ನೆಗಹಿದನು ಪರಮೆಕ್ಕ ।
ಪಾಳು ತಕ್ಕೈಸಿದನು ಬಕುತನ ।
ಮೌಳಿಯನು ತನ್ನೆರಡುಕರತಳದಿಂದೆ ಮೈಯ್ದಡವಿ ॥
ಹೇಳಿದನು ಕಾರ್ಯವನು ತನ್ನಯ ।
ಮೇಲೆ ಮಣಿಕೃತದೋಷವನು ಜನ ।
ಜಾಲದಾವಿರ್ಭವಿಸಿದುದನಾ ಜಾಂಬವಂತಂಗೆ ॥೧೬೮॥

ಇತ್ತನಾತನು ಬಳಿಕ ತನ್ನಯ ।
ಪುತ್ರಿಯನು ಜಾಂಬವತಿಯೆಂಬಳ ।
ನತ್ಯಧಿಕಗುಣರೂಪಸಂಪನ್ನೆಯನು ಮಣಿಸಹಿತ ॥
ಮತ್ತೆ ಬಹುವಿಧವಸ್ತುಗಳನೊಲಿ ।
ದಿತ್ತು ಪೂಜಿಸಿದನು ಪರಾತ್ಪರ ।
ವಸ್ತುವನು ವೇದಾಂತವಿಶ್ರುತಕೀರ್ತಿಯನು ನಲಿದು ॥೧೬೯॥

ರತ್ನವರವನು ಕೊಂಡು ಕನ್ಯಾ ।
ರತ್ನ ಸಹಿತಾನಂದದಲಿ ಗುಣ ।
ರತ್ನಮೂರುತಿ ಪುರಕೆ ಬಿಜಯಂಗೈಯ್ಯುತಿರೆ ಕಂಡು ॥
ಯತ್ನದಲಿ ಪುರವಾಸಿಜನ ನವ ।
ರತ್ನಮಯತೊಡಿಗೆಗಳಲೆಸೆಯುತಲು ।
ನೂತ್ನನವನೆಂದಿದಿರುಗೊಂಡರು ವಿವಿತವಿಭವದಲಿ ॥೧೭೦॥

ಕರೆದು ಸತ್ರಾಜಿತನನಾಮುರ ।
ಹರನು ಸಭೆಯಲಿ ನೆಱೆದ ಪೃಥ್ವೀ ।
ಶ್ವರರ ಬಾಂಧವನಿಕರದೊಡ್ಡೋಲಗದ ಮಧ್ಯದಲಿ ॥
ಹರುಷ ಮಿಗಲಂದಾಸ್ಯಮಂತಕ ।
ವರಮಹಾರತ್ನವನು ಕೊಟ್ಟನು ।
ಪರಮಧಾರ್ಮಿಕನೆನುತ ಕರುಣಾವನಧಿ ಕಯ್ಮುಗಿದು ॥೧೭೧

ಬಱಿದೆ ಹೇಳದೆನಕಟ ಲೋಕ ।
ಕ್ಕುರುವ ದೈವದ ಮೇಲೆ ದೋಷವ ।
ನಱಿಯದಜ್ಞಾನಿಗಳದಾರೆನ್ನಂತೆ ಭುವನದಲಿ ॥
ಕೊಱತೆ ಹೊತ್ತುದು ನನ್ನ ಮೇಲೆನು ।
ತೆಱಗಿ ಲಜ್ಜಾಭಾರದಲಿ ಕ ।
ಯ್ಮಱೆಯ ಮೊಗದಲಿ ಕೊಂಡ್ಡನಾ ಸತ್ರಾಜಿತನು ಮಣಿಯ ॥೨೭॥

---

## ಸನತ್ಕುಮಾರ ಷಟ್ಪದಿ.

ಕವಿಬೊಮ್ಮರಸ ಅಥವಾ ಕುಮಾರಬೊಮ್ಮರಸನೆಂಬ ಜೈನ ಕವಿಯು ಈ ಗ್ರನ್ಥವನ್ನು ರಚಿಸಿ ಹೆಸರುಗೊಂಡನು. ಜಿನದತ್ತರಾಯ ಚರಿತ್ರ, ಮತ್ತು ದ್ವಾದಶಾನುಪ್ರೇಕ್ಷೆ ಇವನ್ನು ಪೂರ್ವದಲ್ಲಿಯೇ ಬರೆದ ಪ್ರಸಿದ್ಧನಾದ ಕವಿಬೊಮ್ಮರಸನಂತೆ ಇವನೂ ಗ್ರನ್ಥಗಳನ್ನು ರಚಿಸಿದವನಾದಕಾರಣ ಈ ಕಾವ್ಯವನ್ನು ಬರೆದ ಬೊಮ್ಮರಸನಿಗೆ 'ಕುಮಾರ ಬೊಮ್ಮರಸ' ಎಂಬ ಹೆಸರು ಬಂದಿರಬಹುದು. ಈತನು ಕ್ರಿಸ್ತಶಕ ೧೫–೧೬ನೆಯ ಶತಮಾನದ ಕವಿಯಾಗಿರಬಹುದೆಂದು ತೋರುತ್ತದೆ. ಈತನು ಪಾರ್ಶ್ವಜಿನೇಂದ್ರಚಂದ್ರನ ಶಿಷ್ಯನೆಂದು ತಿಳಿದುಬರುತ್ತದೆ.

ಈ ಸನತ್ಕುಮಾರಷಟ್ಪದಿಯ ಗ್ರನ್ಥಕ್ಕೆ ಕಥಾನಾಯಕನು ಸನತ್ಕುಮಾರ. ಈ ಅರಸನ ಚರಿತ್ರವನ್ನು ಇದರಲ್ಲಿ ಕೊಂಡಾಡಿದೆ. ಈ ಕಥೆಯನ್ನು ಮಗಧ ನೃಪಾಲನಾದ ಶ್ರೇಣಿಕನಿಗೆ ಗೌತಮಗಣಧರನು ಹೇಳಿದುದಾಗಿ ಬರೆದಿದೆ. ಈ ಗ್ರನ್ಥದಲ್ಲಿ ಹದಿನೇಳು ಸಂಧಿಗಳಿವೆ. ಮಾದರಿಗಾಗಿ "ರಾತ್ರಿಯವರ್ಣನೆ" ಯ ಕೆಲವು ಪದ್ಯಗಳು ಇದರಿಂದ ಉದ್ಧರಿಸಲ್ಪಟ್ಟಿವೆ.

ಸನತ್ಕುಮಾರ ಷಟ್ಪದಿ.

### ೨೪. ರಾತ್ರಿಯ ವರ್ಣನೆ.

ಭಾಮಿನೀಷಟ್ಪದಿ.

ತೇಜವಡಗಿತು ಲೋಕಬಾಹಿರ ।
ರೋಜೆಯಾಯಿತು ಗತಿಯ ಕಾಣೆ ಸ ।
ರೋಜನಿಧಿಯನಿಂದಗಲ್ದನಂಬರ ಮೊದಲೆ ಬಯಲಾಯ್ತು ॥

ಈ ಜಗವ ತಿರುತಿರುಗಿ ನೊಂದೆನು !
ಮಾಜಲೇನಸುದೊಱೆವೆನೆಂದಂ ।
ಭೋಜಸಖನಪರಾದ್ರಿಯಡರ್ದನು ಬಿದ್ದನಬ್ಧಿಯಲಿ ॥೧೩೩॥

ತೋಱೆ ಸಂಧ್ಯಾರಾಗ ಪಡುವಲು ।
ಪಾಱೆ ಪಕ್ಕಿಗೆ ವಿಹಗಸಂತತಿ ।
ಜಾಱೆ ಜಲಜಾತಗಳ ವೈಸಿರಿ ತಾರೆಗಳ ಬಳಗ ॥
ಏಱೆ ಗಗನಾಂಗಣಕೆ ಸೊಂಪುರೆ ।
ಬೀಱೆ ಕೈರವವನಕೆ ತಮವನು ।
ಕಾಱೆ ದಿಕ್ಕನ್ಯೆಯರು ರವಿಯಪರಾಬ್ಧಿಯಲಿ ಮುಳುಗೆ ॥೧೩೪॥

ಭೂತಲದೊಳುಳ್ಳಖಿಳಸುಜನ ।
ವ್ರಾತ ತಮತಮಗುಚಿತಸುಪ್ತಿಸ ।
ಮೇತದಿಂದಿರಲನಿತಕಾಯ್ತು ನಿಶಾನ್ತಯಾಮವದು ॥
ಈ ತಮವ ಧಿಕ್ಕರಿಸಿ ಭವದೀ ।
ಯಾತಪದಿ ಧರೆಯನು ಬೆಳಗುವ ಮ ।
ಹಾತರಣಿ ಬಾರೆಂದು ಕೋೞಿಗಳುಲಿದು ಕೂಗಿದುವು ॥೧೩೫॥

ಹೂಡಿದುವು ಸಿರಿವನೆಯ ಬಾಗಿಲು ।
ಕೂಡೆವೆರೆದಳಿಗಣವು ಸೆಱೆಬಿ ।
ಟ್ಟಾಡುತಿರ್ದುವು ಲೀಲೆಯಲಿ ಚಕ್ರಗಳು ಸಂತಸದಿ ॥
ಕೂಡಿದುವು ತಂಬೆಲರು ತಣ್ಣನೆ ।
ತೀಡೆ ರಥವನು ಹೂಡಿ ದಿನಕರ ।
ಮೂಡವೆಣ್ಣಿನ ಪಣೆಯ ಚಂದಿರವಟ್ಟನಂತೆಸೆದ ॥೧೩೬॥

ಇರುಳುವೆಣ್ಣಿನ ಜವ್ವನಂ ಸಲೆ ।
ಕೊರಗಿತಾನಂದಿಸುವ ಕುವಲಿನಿ ।
ಶಿರವ ಬಗ್ಗಿಸಿ ತೂಕಡಿಸಿದಳು ಮಲಗಿದಬ್ಜಿನಿಯು ॥
ಹರುಷದಿಂ ಮೊಗವೆತ್ತಿ ನಗುತಿರೆ ।
ಕರದಿ ಪ್ರಾಗಂಗನೆಯು ಮನ್ನಿಸಿ ।
ತರಣಿ ನೆಲಸಿದನುದಯಪರ್ವತಶಿಖರವಿಷ್ಟರದಿ ॥೧೩೩॥

## ಸಾಳ್ವಭಾರತ.

## ಲಾಕ್ಷಾಗೃಹದಹನ.

ಈ ಭಾಗವು ಜೈನಕವಿಯಾದ ಸಾಳ್ವನ ಭಾರತದಿಂದ ಉದ್ಧೃತವಾಗಿದೆ. ಈ ಸಾಳ್ವಕವಿಯು ಕೊಂಕಣದೇಶದಲ್ಲಿದ್ದ "ನಗಿರ" ನಗರಕ್ಕೆ ದೊರೆಯಾಗಿದ್ದ ಸಾಳ್ವ ಮಲ್ಲನರೇಂದ್ರನ ಸಭೆಯಲ್ಲಿ "ಪಟ್ಟದ ಕವಿ" ಎಂದು ಹೆಸರುಗೊಂಡಿದ್ದನು. ಸುಮಾರು ೧೬ನೆಯ ಶತಮಾಸದ ಕೊನೆಯಲ್ಲಿ ಈತನು ಜೀವನ್ತನಾಗಿ ಪ್ರಸಿದ್ಧಿಗೆ ಬಂದಿರುವಂತೆ ತಿಳಿದುಬರುತ್ತದೆ. ಈತನು ಭಾಮಿನೀಷಟ್ಪದಿಯಲ್ಲಿ ರಚಿಸಿರುವ ಭಾರತ ಗ್ರನ್ಥವು ೧೬ ಪರ್ವಗಳಾಗಿ ವಿಭಾಗಿಸಲ್ಪಟ್ಟಿದೆ. ವ್ಯಾಸರಿಂದ ಪ್ರಣೀತವಾದ ಸಂಸ್ಕೃತ ಮಹಾಭಾರತದ ವಿಷಯಗಳೇ ಬಹಳವಾಗಿ ಈ ಗ್ರನ್ಥದಲ್ಲಿ ಬರೆಯಲ್ಪಟ್ಟಿದ್ದರೂ ಜೈನಮತದ ಸಂದರ್ಭಗಳೂ ಅದಕ್ಕೆ ಅನುಗುಣವಾದ ವ್ಯತ್ಯಾಸಗಳೂ ಅಲ್ಲಲ್ಲಿ ಕಾಣಬರುತ್ತವೆ. ಈ ಗ್ರನ್ಥವಲ್ಲದೆ ಸಾಳ್ವಕವಿಯು ಮತ್ತೊಂದು ಗ್ರಂಥವನ್ನೂ ರಚಿಸಿರುವನು. ಇದರ ಹೆಸರು "ರಸರತ್ನಾಕರ". ಈತನು ಸಾಳ್ವಸಾಂಗತ್ಯವೆಂಬ ವೈದ್ಯಗ್ರನವನ್ನೂ ಬರೆದಿರುವಂತೆ ಹೇಳುವರು.

---

### ಭಾಮಿನೀಷಟ್ಪದಿ.

### ೨೫. ಲಾಕ್ಷಾಗೃಹದಹನ.

ಕೇಳಲೆ ಶ್ರೇಣಿಕಧರಿತ್ರೀ ।
ಪಾಲ ವಿದುರನು ತಿಳಿದನರಗಿನ ।
ಶಾಲೆಯೆಂಬುವ ಕಳುಹೆ ಗೂಢದಿ ಕನಕ ಪಾಂಡವರ್ಗೆ ॥
ಹೇಳಲಾಲೋಚಿಸಿಯೆ ದೇಶವ ।
ಶಾಲವನು ಗೂಢದಲಿ ಚರಿಸುವ ।
ಬಾಳುವೆಯನವರೊಲಿಯೆ ಕನ್ನವ ಸವೆದನಾ ಕನಕ ॥೧೨೮॥

ಸಿಲ್ಲಿ ನೀವನ್ನವರನಾವೇ ।
ಳ್ದಲ್ಲದೆ ಕದಲಬೇಡವೆಂದವ ।
ನಲ್ಲಿರದೆ ಪೊರಮಟ್ಟು ತನ್ನುಜ್ಜುಗವ ಚಿಂತಿಸುತ ॥

ನಿಲ್ಲವತ್ತೆಡೆಯಾಡುತಿರ್ದನು ।
ಭಿಲ್ಲಿಯೈವರು ಸುತರು ಸಹ ಪಥ ।
ದಲ್ಲಿ ಬರೆ ನೆಱೆಕಂಡು ಮನದಲಿ ನಲಿದನಾಕನಕಾ ॥೨೭೯॥

ಎಲೆ ಬಡವೆ ನೀನಾರು ಈ ಮ ।
ಕ್ಕಳ ಸಹಿತಲಿತ್ತತ್ತ ಪೋದಪೆ ।
ಬೞಲ್ದೆಯೆನೆ ದೇಸಿಗಿತಿ ನಾನು ನಿಷಧೆಯೆನಿಪೆನಣ್ಣಾ ॥
ಪೊೞಲೊಳಾವಿರುಳಿಲ್ಲಿಹೆವು ಎನೆ ।
ತಳುವದೆನ್ನೊಡವನ್ನಿ ನಿಮ್ಮಯ ।
ಬೞಲಿಕೆಯ ಕಳೆದೊಂದೆಡೆಯೊಳಿರಿಸುವೆನು ತಾನೆಂದ ॥೨೮೦॥

ಎನಲು ಕನಕನ ಹಿಂದೆ ಬರಲರ ।
ಮನೆಯೊಳೊಂದಂತರದಿ ಪಾಂಡವ ।
ತನಯರಱಿಯದವೋಲಿರಿಸಿಯಿರುಳರಮನೆಯ ಪೊಕ್ಕು ॥
ವಿನುತ ಕುಂತಿಯು ಸಹಿತ ಪಾಂಡವ ।
ರನಿಬರನು ಸಹದಾಸುರಂಗದೊ ।
ಳನುವಿನಿಂ ಪೊಱಮಡಿಸಿ ಮುಚ್ಚಿದನಾ ಸುರಂಗವನು ॥೨೮೧॥

ಬೞಿಕಲೀಯಱುವರನು ಅರಮನೆ ।
ಯೊಳಗೆ ಕರೆದುಣಲಿಟ್ಟು ಮನ್ನಿಸಿ ।
ಬೞಲಿದಿರಿ ಯಿಲ್ಲಿಯೆ ಬಱಗಿಯೆಂದತಿವಿನಯದಿಂದ ॥
ತಳುವದೊಱಗಿಸಿ ದೀವಿಗೆಯ ಕಡು ।
ಬಳಮ ಸುಟ್ಟುದೆನಿಪ್ಪ ಶಂಕೆಯ ।
ಬಳಸಿ ಕಡುನಡುವಿರುಳದಕೆ ಕಿಚ್ಚಿಕ್ಕಿ ಪೊಱಮಟ್ಟ ॥೨೮೨॥

ಹೊಗೆದು ಹೊತ್ತಿತು ಭುಗಿಭುಗಿಲ್ ಧಗ ।
ಧಗಯೆನುತ ಕೇಸುರಿಯ ನಾಲಗೆ ।
ನೆಗೆದುದಚ್ಚರಿಯೆನೆ ತ್ರಿಪುರವುರಿದಂತೆ ನೆರೆನೆರೆದು ॥
ಗಗನವನು ಚುಂಬಿಸಿತು ಇರುಳದು ।
ಹಗಲೆನಿಸಿದುದು ಸುತ್ತ ಯೋಜನ ।
ವಗಲದಲಿ ಈಗು ಬೆಳಗೆ ಕಳವಳಿಸಿದುದು ಪುರಜನವು ॥೨೮೩॥

ಕರಿಕುಲದ ನಿಗಳಗಳ ಕಳೆದರು |
ತುರಗಗಳನತ್ತಿತ್ತಲೊಯ್ದರು |
ಸರಸರನೆ ಗೋವೃಂದವನು ತೆವರಿದರು ತಮತಮಗೆ ||
ಉರಿದರಯ್ಯೋ ಪಾಂಡವರು ನಿಂ |
ದುರಿವ ಕಿಚ್ಚಿನಲೆಂದು ಸರ್ವರು |
ಮರುಗಿದರು ಗೋಳಿಟ್ಟುದಾಪಾಂಡವರಪರಿಗ್ರಹವು ||೧೮೪||

ಕುರುಪತಿಯ ಸೇವಕ ಪುರೋಚನ |
ಹರುಷಬಟ್ಟನು ತಾನು ತನ್ನವ |
ರಿರದೆ ಅರಮನೆಯುರಿಸುತ್ತಲು ಬೆಳಪನಕ ತಿರುಗಿ ||
ಉರಿಯು ತನ್ನೊಳು ತಾನೆ ಸಂದಲು |
ಮೊರೆಯಿಡುತ ಪಾಂಡವರ ಪಳಯುರು |
ಮುರುಟಿದಾಖುಂಪೆಣನನೊಬ್ಬಳಿವೂಡಿ ದಹಿಸಿದರು ||೧೮೫||

ದೀವಳಿಗೆಯಾಹಬ್ಬದಲಿ ಮಿಗೆ |
ದೀಪಿಗೆಯು ಬೆಳಗುವ ವಿಧಾನದಿ |
ನಾವೆ ಸುಟ್ಟವರಸುವ ಕೊಳಬೇಕೆಂದಿಹನ್ನವರ |
ತಾವೆ ವಿಧಿವಶದೊಳವಿನಿಂದಾ |
ದೀವಿಗೆಯು ಮನೆಯೊಳುರ್ಜಿ ಬೆಂದರು |
ಭೂವರಸ ಪುಣ್ಯವಲೆ ಎಂದ ಪುರೋಚನನು ಮನದಿ ||೧೮೬||

ಬಟಿಕಿದೆಲ್ಲವ ಕಂಡು ಪಾಂಡವ |
ರಟಿಪರೆಂದು ಪುರೋಚನನು ಭಳ |
ಭಳನೆ ನೇಸಱು ಮೂಡುತಿರಲಾಬಿನ್ನವತ್ತಳೆಯ ||
ತಳುವದಾಗಳೆ ಕೊಟ್ಟು ದೂತನ |
ಕಳುಹಿ ಹಸ್ತಿನಪುರವ ಪೊಕ್ಕನು |
ಘಟಿಲನಾಧೃತರಾಷ್ಟ್ರನೊಡೆ ಓಲಗವ ನೆಯ್ದಿದನು ||೧೮೭||

ಚರನು ರಾಯಸಿಗಂಗೆ ಯೋಲೆಯ |
ನಿರದೆ ಕೊಡೆ ಮನದೊಳಗೆ ಯೋದಿದ |
ಸರಸ ಬಿನ್ನಹವೆಂದು ಪಾಂಡವರುಱಿದ್ದವೊಕ್ಕಣೆಯ ||

ವಿರಚಿಸಿದನಾಚರನ ಮುಖದಿಂ |
ಮರಳಿ ತದ್ವೃತ್ತಾಂತವನು ಬಿ |
ತ್ತರಿಸಿ ಬಿನ್ನಹಮಾಡಿಸಿದನೆದೆಗೆಡಲು ಕೇಳ್ದವರು ||೭೪೮||

ಸುರನದೀಸುತನಂಧನೃಪತಿ ವಿ |
ದುರ ಗರುಡಿಯಾಚಾರ್ಯಮುಖ್ಯರು |
ಪಿರಿದು ದುಃಖಿತರಾದರಾ ಕೌರವನು ಹೊಸುಕದ ||
ಕರುಣರಸವನು ಮೆಱೆದು ತಾ ಗೆ |
ಯ್ದುಱಿತರೋಪಾಯವು ಫಲಿಸಿತೆಂ |
ದುರೆ ಮನವಲುಬ್ಬಿದನು ನರಳಿದರಾ ಬಟಿಕ್ಕವರು ||೭೪೯||

ಅರಗಿನಾಮಾಡದಲಿ ಕೌಂತೇ |
ಯರನು ಕೌರವ ಕೊಂದನೆಂದಾ |
ತೆಱನನೆಲ್ಲವ ಕೇಳಿ ಕೃಷ್ಣನು ಖೇದವನು ತಳೆದು ||
ಭರದೆ ಹಸ್ತಿನಪುರಕೆ ದಂಡೆ |
ತ್ತಿರದೆ ನಡೆಯೆನಲು ಹಲಧರನವ |
ಸರವಿದಲ್ಲನುಜಾತ ನೀನೀತೆಱನ ಕೇಳೆಂದ [೭೫೦||

ಮೆಱೆವೆವೇ ಪಾಂಡವರು ಮಡಿದುದ |
ಮಱೆವನೆಂತಂತಕನು ಶಕ್ರನು |
ಮೆಱೆಯನಾಜಿಗೆಯಂಜನೆಯ ಗಂಡನು ಮಡಿದನೋ ಏಂ ||
ಅಱಿಸಿಕೊಂಡವ ಬಾರದಿರನೀ |
ತೆಱನ ನೋಡುವ ಬೇಱೆ ಬೆಱಸಿಡು |
ಯೊಱೆಯನುಚ್ಚಲದೇಕೆನುತ ನಿಲಿಸಿದನು ಮುರರಿಪುವ ||೭೫೧||

ಅತ ಲಾ ಪಾಂಡವರು ನದಿನಗ |
ವುತ್ತರಿಸಿ ಪೋಪಲ್ಲಿ ವಿದ್ಯೋ |
ನ್ಮತ್ತಕಿರ್ಮ್ಮೀರದಾಸುರನು ಕಾಮ್ಯಕವಿಪಿನದೊಳಗೆ ||
ಇತ್ತ ಬರದಿರು ತನ್ನ ಬನವೆಂ |
ದೆತ್ತಿಬರೆಯುನ್ತಕವದನದಲಿ |
ತುತ್ತಿದನು ಕಲಿಭೀಮರೆಲ್ಲರು ಪೊಕ್ಕರಾಬನವ ||೭೫೨||

## ವಾಲಿರಾವಣರ ಸಂಗ್ರಾಮ.

ಈ ಭಾಗವು ತಿರುಮಲೆವೈದ್ಯನಿಂದ ಪ್ರಣೀತವಾದ ಉತ್ತರರಾಮಾಯಣದಿಂದ ಉದ್ಧೃತವಾಗಿದೆ. ಈ ಗ್ರಂಥಕರ್ತೃವು ವೈಷ್ಣವ ಕವಿಯೆಂದು ತೋರುತ್ತದೆ. ಇವನ ಗ್ರಂಥವನ್ನು ಪರಿಶೀಲನೆಮಾಡಿ ನೋಡುವಲ್ಲಿ ಈತನು ಆಧುನಿಕ ಕವಿಯೆಂದು ಕಾಣಬರುವುದು. ಈತನ ವಿಷಯವಾಗಿ ಇನ್ನೇನು ಸಂಗತಿಯೂ ಸದ್ಯವಲ್ಲಿ ತಿಳಿಯಬಂದಿಲ್ಲ.

---

ಉತ್ತರರಾಮಾಯಣ.

### ೨೬. ವಾಲಿರಾವಣರ ಸಂಗ್ರಾಮ.

ಸೂ॥ ಬಲುಹನರಿಯದೆ ಕೆಣಕಿ ವಾಲಿಯ ।
ಕೊಳುಗುಳಕೆ ಮೇಲ್ವಾಯ್ದು ಪಿಡಿವಡೆ ।
ಅಳವಳಿದು ಸಾಮದಲಿ ಕೆಳೆಗೊಂಡನು ದಶಗ್ರೀವ ॥

ಕೇಳಿದೈ ಕಾಕುತ್ಸ್ಥವಂಶಸ್ಥ ।
ವಾಲಿ ಬಲ್ಲಿದರಿಂದ ಬಲ್ಲಿದ ।
ರಾಳುತನದಧಟುಳ್ಳವರು ಹಲರುಂಟು ಲೋಕದಲಿ ॥
ಬೀಳುಕೊಂಡು ಪುಲಸ್ತ್ಯನನು ದಶ ।
ಮೌಳಿ ಮನವುಬ್ಬಿನಲಿ ಧರಣೀ ।
ಪಾಲರೊಳು ಬಲಯುತರನೊತ್ತರಿಸಿದನು ಕಾಳಗಕೆ ॥೨-೩॥

ದಿವಿಜರವು ಜಿತಸುರನರೋರಗ ।
ಭುವನನ್ಯದಿದನೊಪ್ಪು ವಾಲಿಯ ।
ಭವನವೆಸು ವಿಖ್ಯಾತಕಿಷ್ಕಿಂಧಾಖ್ಯಪುರವರವ ॥೨-೪॥

* * * *
* * * *
* * * *

ಅಲ್ಲಿ ತಾರಾಪಿತನೆನಿಪ ಕಪಿ ।
ವಲ್ಲಭನು ತಾರಾಖ್ಯನಿರೆ ಸುರ ।
ದಲ್ಲಣನು ನುಡಿಸಿದನು ವಾಲಿಯ ಸಚಿವನೆಂದರಿದು ॥

ಎಲ್ಲಿ ವಾಲಿಯು ಬರಿಸು ರಣದಲಿ |
ಬಲ್ಲಿದನು ಗಡ ನೋೞ್ಪೆನೆನೆ ಕಪಿ |
ಸೊಲ್ಲಸಿಂತೆಂದನು ಮುಗುಳ್ನಗೆ ಸೂಸೆ ರಾವಣಗೆ ||೧೯೫||

ಎಲೆ ನಿಶಾಚರ ಸಿನ್ನ ಭುಜಬಲ |
ದಳವನಱಿಯದೆ ವಾಲಿಯೊಳು ಕೊಳು |
ಗುಳವ ಬಯಸುವೆಯೋ ಬಯಸುವಯೊ ಸಾವನಕಟೆನುತ ||
ಗೆಲವು ಘಟಿಸದು ಸಿನಗೆ ದಕ್ಷಿಣ |
ಜಲಧಿಗೈದಿದನಾಪ್ಲವಂಗಮ |
ಕುಲಶಿರೋಮಣಿಯೊಂದು ಗಳಿಗೆಗೆ ಬಾರದಿರನೆಂದ ||೧೯೬||

ಸೈರಸಿನ್ನರೆಗಳಿಗೆ ಸಿನ್ನನು |
ಮಾರಿಗಡಬಳವಿಕ್ಕುವನು ಕಪಿ |
ವೀರನೆನೆ ಕಪಿಸಟಿಸನನು ಕಡುಮುಳಿದು ಝುಂಕಿಸುತ ||
ದಾರಿದೆಗೆದನು ದಕ್ಷಿಣಾರ್ಣವ |
ತೀರಕತಿವೇಗದಲಿ ರಾಕ್ಷಸ |
ವೀರನೈದಿದನಭ್ರಪಥದೊಳಗಾಮಹಾರ್ಣವವ ||೧೯೭||

ಕಂಡನೈ ಕಪಿಕುಲಕಮಲಮಾ |
ರ್ತಾಂಡನನು ಮಾರ್ತಾಂಡತೇಜೋ |
ಮಂಡಲನನಾಖಂಡಲನ ಸುತನ ದಶಕಂಧರನು ||
ಚಂಡಬಲನಿವನೆಂದೆನುತ ಭೂ |
ಮಂಡಲಕೆ ನಭದಿಂದಿಳಿದು ಕೈ |
ಕೊಂಡನೈ ಪದಶಬ್ದವಾಗದ ಗತಿಚಮತ್ಕೃತಿಯ ||೧೯೮||

ಚೆನ್ನದಲಿ ನಡೆತಂದು ವಾಲಿಯು |
ಬೆನ್ನ ದೆಸೆಯಲಿ ರೂಪುದೋಱದೆ |
ತನ್ನ ಭುಜಬಲದನಿತಱೊಳು ಬಿಗಿದನು ಕಪೀಶ್ವರನ ||
ಉನ್ನತೋನ್ನತಬಾಹುಬಲಸಂ |
ಪನ್ನನಲ್ಲಾ ವಾಲಿ ಬಗೆಯದೆ |
ತನ್ನ ಶೌಚವ್ರತದೊಳಿರ್ದನು ಮೌನಮುದ್ರೆಯಲಿ ||೧೯೯||

ತಿರುಗಿ ನೋಡಿದನೊರ್ವ ರಜನೀ ।
ಚರನನಾಶೌಚಾಂತದಲಿ ಕ ।
ಣ್ಡಿರಿಭಯಂಕರಸಿಱುಕಿದನು ಬರಸೆಳೆದು ಕಕ್ಷದಲಿ ॥
ಕರಿ ನರಿಯುಸೀಕ್ಷಿಸುವವೊಲು ಕೇ ।
ಸರಿ ಮೊಲವ ನಿಟ್ಟಿಸುವೊಲಾ ದಶ
ಶಿರನನೆಣಿಸದೆ ಮಿಂದು ಸಂಧ್ಯಾವಿಧಿಯನೆಸಗಿದನು ॥೩೦೦॥

ಅಲ್ಲಿ ಜಪವನು ವಿಧಿವಿಧಾನಗ ।
ಳಲ್ಲಿ ವಿರಚಿಸಿ ಪಶ್ಚಿಮಾಬ್ಧಿಗೆ ।
ನಿಲ್ಲದೈದಿದನಸುರಪತಿಸಹಿತಭ್ರಮಾರ್ಗದಲಿ ॥
ಅಲ್ಲಿ ಸಂಧ್ಯಾಸ್ನಾನಜಪಗಳ ।
ನೆಲ್ಲವನು ವಿಧ್ಯುಕ್ತದಲಿ ಕಪಿ ।
ವಲ್ಲಭನು ಮಾಡಿದನು ಕೌಂಕುಳಿಲೌಂಕಿ ರಕ್ಕಸನ ॥೩೦೧॥

ನಡೆದನಲ್ಲಿಂ ಮೇಲೆ ಬಡಗಣ ।
ಕಡಲಿಗಸುರನ ಪೊತ್ತು ಫಣಿಪನ ।
ಪಿಡಿದು ನಡೆವ ಖಗೇಂದ್ರನಂತವನಭ್ರಮಾರ್ಗದಲಿ ॥
ಬಿಡುದಲೆಯು ನಿಡುದೋಳುಗಳ ಜೋ ।
ಲೊದ್ಡಲು ಸುರರಿಪು ಜವದಿನಡಸುತೆ ।
ಪಿಡಿದ ಫಲಿತನವಾಮ್ರಕುಜದಂತಿರ್ದನಭ್ರದಲಿ ॥೩೦೨॥

ಆ ಸಮುದ್ರಸ್ನಾನ ಜಪಸಂ ।
ಧ್ಯಾಸುಕರ್ಮವನೆಸಗಿ ಕಪಿವರ ।
ನೋಸರಿಸದೈದಿದನು ಪೂರ್ವಾಂಬುಧಿಗೆ ರಿಪುಸಹಿತ ॥
ಆಸುಪಾರ್ಶ್ವಮಹೋದರಾದ್ಯರು ।
ಗಾಸಿಯಾದರು ಕಪಿಪದದ್ರುಮ ।
ದಾಸಮೀರನ ಪೊಯ್ಲಿನಲಿ ರಣವವನೊಳಲ್ಲೆಂದು ॥೩೦೩॥

ಮಿಂದುಪೂರ್ವಾಬ್ಧಿಯೊಳು ಸಂಧ್ಯಾ ।
ವಂದನಾದಿವಿಧಾನವನು ಮುದ ।
ದಿಂದೆಸಗಿ ಕಕ್ಷಾವಲಂಬಿ ಸುರಾರಿ ನೋಡುತಿರೆ ॥

ಬಂದನಗಣಿತ ಯೋಜನವ ಕಳೆ ।
ದಂದು ದೈತ್ಯನ ಪುತ್ರ ಬಱಲಿಕೆ ।
ಯಿಂದ ಕಿಷ್ಕಿನ್ಧೋಪವನದೊಳು ಬಿದ್ದನಳವೞಿದು ॥೨೦೪॥

ಎಡದ ಕೌಂಕುೞ ಬಿಗುಹು ಮೆಲ್ಲನೆ ।
ಸಡಿಲವಾಗಿರೆ ನುಸುಳಿ ರಿಪು ಬೆಂ ।
ಗಡಗಿ ಸರಿದಿರೆ ಮುರಿದು ನೋಡಿದ ಸುರಪತಿಯ ಸೂನು ॥
ನುಡಿಸಿದನು ನೀನಾರೆಲವೊ ನಿನ ।
ಗೊಡೆಯರಾರೆಮ್ಮಲ್ಲಿ ನಿನಗು ।
ಗ್ಗಡದ ಕೆಲಸವಿದೇನೆನುತ ನಗೆಯುಗೆ ಮುಖಾಬ್ಜದಲಿ ॥೨೦೫॥

ಆದಶಾಕ್ರುತಿಯನು ಧರಿಸಿದಬು ।
ಜೋದರನೆ ತವೆ ಸಾಹಸಕೆ ಸರಿ ।
ಯಾದ ಸುಭಟರು ಜಗದೊಳಿಲ್ಲ ವಿಚಿತ್ರ ಸತ್ವನಲಾ ॥
ಕಾದಿ ಬದುಕುವರುಂಟೆ ನಿನ್ನೊಡ ।
ನೈದಿಸೆನ್ನೊಳು ಮಿತ್ರಭಾವವ ।
ಭೇದವಿಲ್ಲದೆ ದೇಶಕೋಶವಿಶೇಷದೊಳಗೆಂದ ॥೨೦೬॥

ಆಗಲದಕೇನೆಂದೆನುತ ಶತ ।
ಯಾಗಸುತನರ್ಚಿಸಿ ಕ್ರುಶಾನುವ ।
ನಾಗ ನಂಬುಗೆಗೊಳಿಸಿದನು ಕೈಮುಟ್ಟಿ ರಾವಣಗೆ ॥
ಪೋಗಿ ಕಿಷ್ಕಿನ್ಧಾ ನಗರಿಗನು ।
ರಾಗದಲಿ ರಾವಣನ ಮನ್ನಿಸಿ ।
ಯಾಗಭೀರಪರಾಕ್ರಮನುಃ ಬೀೞ್ಕೊಟ್ಟನುಚಿತದಲಿ ॥೨೦೭॥

## ಪರಿವರ್ಧಿನಿ ಷಟ್ಪದಿ.

### ಕುಮುದೇಂದುರಾಮಾಯಣ.

### ೨೭ ಲಂಕಾದಹನ.

ಒದವಿದ ರಣರಾಗದಿ ನಿಂತಯ್ಯನ ।
ಪದಕಮಲವನೊಲವಿಂ ಬೀಳ್ಕೊಂಡು ।
ತ್ರಿದಶಾಧಿಪರಿಪು ಚತುರಂಗಬಲಂ ಬೆರಸತಿರಭಸದಲಿ ॥
ಕದನಾವನಿಯೊಳ್ ನಿಲಿಸುತನಂ ಕಂ ।
ಡುದಯಿಸೆ ಕೋಪಂ ಕೈವೀಸಿದನು ।
ನ್ಮದಭಟಗಜರಥತುರಗಂಗಳನುಕ್ಕೆವದಿಂ ರಕ್ಕಸರ ॥೩೦೮॥

ಬಿರುದಿನ ರಕ್ಕಸನಾಯಕರೆಲ್ಲಂ ।
ತರತರದಿಂ ನಿಶಿತಾಯುಧಮಂ ಕೊಂ ।
ಡರವರಿಸದೆ ಮೇಲ್ವಾಯ್ದೊಡದಂ ಕಂಡನಿಲಸುತಂ ನಗುತ ।
ಭರದಿಂ ಪಿಡಿಪಿಡಿದೊರ್ವರನೊರ್ವರ ।
ನುರವಣೆಯಿಂ ಪೊಯ್ದಂತಕಪದಸಕು ।
ಹರಮಂ ಪುಗಿಸಿದನಾಡುತ್ತಿರೆ ಸುತ್ತುಂ ದನುಜಕಬಂಧಂ ॥೩೦೯॥

ವೀರಭಟರ್ ಸಡೆವುವ ಕಂಡೊಮ್ಮೆಯೆ ।
ಭೋರೆನೆ ವಾರಿಧಿತರಳತರಂಗಾ ।
ಕಾರದೆ ಮಸಗಿ ಮಹೋದ್ಧತರೆನಿಸಿದ ರಕ್ಕಸರಾವುತರು ॥
ಪಾರದೆ ಸೆರಗಂ ಬೆರಗಂ ಬಳಸಲ್ ।
ಮಾರುತತನಯಂ ಮಹಿಷಾಸುರನನೆ ।
ಧೀರಂ ಪೆರ್ಗೊಂಬಿಂ ಸುಗಿಪ್ಪಿನೆಗಂ ಪೊಯ್ದುತವಿಸಿದಂ ॥೩೧೦॥

ಕಡೆಗಾಲದ ಮುಗಿಲೊಗೆದು ಗಡಣದಿಂ ।
ಬಿಡೆ ಸುರಿವಂತಿರಲಂಬಿನ ಮಳೆಯಂ ।
ಕಡಗಿ ದನುಜರಂ ಧಿಕ್ಕರಿಸುತ್ತಿರೆ ಪಾವನಿ ಭಾವಿಸುವ ॥

---

* ಈ ಗ್ರನ್ಥಕರ್ತೃವಿನ ಚರಿತ್ರವನ್ನು ಕುರಿತು ೧೬ನೆಯ ಪುಟವನ್ನು ನೋಡಿರಿ.

ತಡೆಯದೆ ರಥದಿಂ ರಥಮಂ ಪೊಯ್ಯು ।
ತ್ತೊಡೆಯುಮುಗದೆ ಶಕಟಾಸುರನಂ ಮು ।
ಕ್ಕಡಿಮಾಡಿದ ಮಧುರಿಪ್ರವನಲಸದಂ ಬಿಸರುಹಲೋಚನನು ॥೨೧೧॥

ಕುಲಗಿರಿಗಳು ನಡೆತಂದಪುವನೆ ಮು ।
ಯ್ಗಲಿ ಜೋದರು ಮಾವಂತರು ಸಜ್ಜಿನ ।
ಕೊಲೆಗಡಿಗಾನೆಗಳಯ್ತಂದೊರ್ಕ್ಕೆಯೆ ಮೂವಳಸಿಂ ಮುತ್ತೆ ॥
ಸಲೆ ನಿಜಪರನಾಮಮಿದನ್ವರ್ಥಂ ।
ಬಲಿಮುಖಚಿಹ್ನಂಗೆನೆ ಗಜಘಟೆಯಿಂ ।
ದಲಸದೆ ಗಜಘಟೆಯುಂ ನೆಱೆ ತಪಿಸಿದನೋಡೆ ನಿಶಾಚರರು ॥೨೧೨॥

ಅನ್ತು ಸೆಡೆಯೆ ದಾನವನಾಯಕರ ।
ತ್ಯನ್ತಂ ಕೋಪಾಟೋಪದೆ ಮುಳಿದ ಕ್ರ ।
ತಾನ್ತನ ತೆಱದಿಂದಿಂದಗಿ ಸೆಡೆಯದೆ ಭರದಿಂ ನಡೆತಂದು ॥
ಮುನ್ನಿರ್ದಸಿತನುಭವನಂ ಕಂ ।
ಡಿನ್ತೆಂದಂ ಕಪಿಕೀಟಕ ತೊಲಗು ಪಿ ।
ಘುನ್ತದಸಿದಿರೊಳಗಿರದೆನೆ ರಾಘವನಾಳನುಮಂ ನಗುತ ॥೨೧೩॥

ಕುಲಪರಿಭವಮಂ ನೆನೆಯದೆ ದುರ್ಗತಿ ।
ಗಲಸದೆ ವಿದ್ಯಾಹಾನಿಯುಮನಱಿಯದೆ ।
ಮಲಿನಾಶಯದಿಂ ಪರವಧುವಂ ಖಳನಾ ತೆಱದಿಂ ತಂದ ॥
ಪಲಲಾದನ ನಿಮ್ಮಯ್ಯನ ತಲೆಯುಂ ।
ಸಲೆ ರಾಮಂ ಕೊಂಬುದನೆಱಿದುಮದೆಂ ।
ತೆಲವೊ ವಿಧುಂತುದನೆಂತಪ್ಪುದು ನಿಪ್ಪಸರದಿನಸುವಾಗು ॥೨೧೪॥

ಎನೆ ಮುಸಿದಾಗಳ ಕೂರಂಬಂ ತೊ ।
ಟ್ಟನಿಲಾತ್ಮಜನಂ ದಶಮುಖಸುತನಿಸೆ ।
ಹನುಮಂತಂ ತಚ್ಛರಮಂ ಗಗನದಿ ಕಡಿಖಂಡಂ ಗಡಿಯೆ ॥
ಕನಲ್ದಂಬಿನ ಬಲ್ಸರಿಯುಂ ರಾವಣ ।
ತನಯಂ ಸುರಿಯಲ್ ಬಗೆಯದೆ ರಾಘವ ।
ನನುಚರನದ ತಪಿಸಿದನಾರಿನ್ನರ್ ಬಿಲುವಿದ್ಯೆಯೊಳನಲು ॥೨೧೫॥

ತ್ರಿದಶಾಧಿಪನಿಭಕುಂಭಸ್ಥಲಮಂ ।
ವಿದಳಿಸಿದೆನ್ನೀ ನಿಶಿತಾಸ್ತ್ರಂಗಳು ।
ತೊದಳೇ ಹುಲುಗಪಿ ನಿನ್ನಂ ತಾಗಲು ನಾಣ್ಚುತ್ತಿರ್ದಪುವು ॥
ಬೆದಱದಿರದಱಿಂ ನಿನ್ನ ನೆಲವೊ ಕೊ ।
ಲ್ಲದೆ ಕಟ್ಟುವೆನೀಗಳೆನುತ್ತುರಗಾ ।
ಸ್ತ್ರದಿನೆಚ್ಚಂ ನಿಚ್ಚಟಗಲಿಯಿಂವಗಿಯಱುತ್ತಿರೆ ಸೇನೆ ॥೩೧೬॥

ಧುರದೊಳ್ ವರುಣಸುತರನೊದವಿದಾರ್ ।
ಪರಿಭವಮಂ ಕಾದೆನ್ನಿದಿರೊಳ್ ತ ।
ಳ್ತುರಗಾಸ್ತ್ರವೆ ತುಡು ಮರುಳೇ ನಿನ್ನಂ ಪುರುಳೆಂದೆನಲೇಕೆ ॥
ಗರುಡಾಸ್ತ್ರದಿನಿದ ಖಂಡಿಸಲೇಕೀ ।
ಪರಿಯೊಳ್ ದಶಮುಖನಂ ನೋಡುವೆನೆನು ।
ತರವರಿಸದೆ ನಿಂದನಿದಿರೊಳೆಂ ವೀರನೊ ಪವನತನೂಜಂ ॥೩೧೭॥

ನೆವದೊಳ್ ದಾನವಚಕ್ರೇಶನ ಕಂ ।
ಡವಿರಳಮೆಸಿಸಿದ ನಯಭಯಮಂ ಬಾಂ ।
ಧವತೆಯುಮಂ ಹಿತಮಂ ಪೇೞಿಲ್ಕಿಂತಾತನ ಬಾಣದೊಳು ॥
ಪವನಸುತಂ ಕಟ್ಟಿಸಿಕೊಂಡೊಡದಂ ।
ಬವರದೆ ಕಟ್ಟಿದೆನೆಂದೇ ತಂದಂ ।
ದಿವಿಜಾರಿಸಭೆಗೆ ತಪ್ಪಂತುರಗನ ಮುಂದಕೆ ಗರುಡನನು ॥೩೧೮॥

ಇವನೇ ವಜ್ರಮುಖನನಿಕ್ಕಿದನಿಂ ।
ತಿವನೇ ವನಭಂಗವ ಮಾಡಿದನಿಂ ।
ತಿವನೇ ಜಾನಕಿಯುಂಗರಮಂ ತಲ್ಲಣಿಸದೆ ತಂದವನು ॥
ಇವನೇ ಮತ್ಸುತನಕ್ಷನ ಕೊಂದವ ।
ನಿವನೆನಗನುವೆರದೊಳಿದಿರ್ಚಿದನಿಂ ।
ತಿವಗಿನ್ನಾವುದು ದಂಡಮೆನುತ ದಶಮುಖ ಕಡುಪಿಂ ಮುಳಿದಂ ॥೩೧೯॥

ಧಾರಿಣೀಚರರಂ ನೀನೋಲಗಿಸಿದ ।
ಕಾರಣಮೇನೆಮ್ಮಯ ಭುಜಪರಿಘದ ।
ಪೌರುಷದಳವಂ ತಿಳಿದಿರ್ದುಂ ಮತ್ತೇಕಿಲ್ಲಿಗೆ ಬಂದೆ ॥

ಆರೀಪದದೊಳ್ ನಿನ್ನಂ ಕಾವರ್ ।
ಮಾರಣಮಂ ರಾವಣನೆಯ್ದಿಸೆ ನಿ ।
ಷ್ಕಾರಣ ಕೆಟ್ಟೆ ವಿನಾಶದ ಕಾಲದೊಳಾರ್ಗಂ ಮತಿ ಕಿಡುಗುಂ ॥೩೦॥

ಗತಿಹಾನಿಗೆ ಮತಿಹಾನಿಗೆ ಪದ್ಯಾ ।
ತತಿಹಾನಿಗೆ ಪಕ್ಕಾದ ದುರಾತ್ಮಂ ।
ಗತಿಬಲತನವಲ್ಲಿಯುದು ದಶಾಸನ ಕೇಡಲ್ಲದೆ ಸಿಸಗೆ ॥
ಹಿತಮನಱಿಯಯಸದಾಗ್ರಹಮಂ ಬಿಡು ।
ಮೃತಿ ನಿನ್ನೊಳ್ ಸಮನಿಸಿತಕ್ಕಟಯೆನ ।
ಹತಿಯಿಸುವನೆನುತ ಮಸಗಿದನಾಭ್ರೂಕುಟಿಮುಖವಶಮುಖನು ॥೩೧॥

ಅದ ಕಂಡನಿಲತನೂಭವನೆಂದಂ ।
ಬೆದಱದೆ ನಿನಗೆ ಹಿತಮನಱಿಪಲ್ ಬಂ ।
ದುದನಱಿಯದೆ ಕಡುಗಲಿತನದಿಂದಂ ನುಡಿಯುದಿರಡಿಗಡಿಗೆ ॥
ಒದವಿದ ರಾಘವದೇವನ ಬೆಸನಿ ।
ಲ್ಲದ ನಿನ್ನಂ ಕೊಲಲೊಲ್ಲದೆ ಪೋದಪೆ ।
ಸದಱಿಂದೆನ್ನಂ ಕಟ್ಟುವರಾರಿಂದಗಿಗಿಂದಗಿಯೆಂಬರ್ ॥೩೨॥

ಎನುತುರಗಾಸ್ತ್ರದ ಬಂಧಮನೆಲ್ಲಮ ।
ನನಿಲಸುತಂ ಬಿಡೆ ತತ್ಪ್ರತಿವಿದ್ಯೆಯಿ ।
ನನಿತುಂ ವಿದ್ಯಾಧರ ಕೂರಸಿಯುಂ ಜಡಿಯುತ್ತುಂ ಬಂದು ॥
ಮುನಿದೊಮ್ಮೆಯು ಮೇಲ್ವಾಯ್ದೊಡನವರಂ ।
ದನುಜೇಂದ್ರಂ ನೋಡುತ್ತಿರೆ ನೆಱೆ ಪಾ ।
ವನಿ ಕೊಂದಂ ಪೊಯ್ದೊರ್ವರಿನೊರ್ವರ ಕಾಲಾಂತಕನಂತೆ ॥೩೩॥

ರಸೆಯಿಂದುರಿಲಿಂಗಂ ನೆಗೆದುದೆನಲ್ ।
ಮಸಗಿ ವಿಲೋಚನದಿಂ ಕೇಸುರಿ ದ ।
ಳ್ಳಿಸೆ ಕೋಪದಿ ಕಿಡಿಕಿಡಿವೋಗುತ್ತಂ ವಾನರರೂಪಂದ ॥
ದೆಸೆದೆಸೆಗೆಲ್ಲರನೋಡಿಸುತಂ ಮಸು ।
ಳಿಸುತಂ ತನ್ನೊಳ್ ಮಾಱಾಂತವರಂ ।
ಪಸಿದ ಕೃತಾಂತನ ಗೆಯ್ತುವ ಕೈಕೊಂಡಭ್ರಕೆ ಲಂಘಿಸಿದಂ ॥೩೪॥

ಮನೆಮನೆದಪ್ಪದೆ ನೆಗೆನುದು ಸಿಲ್ಲದೆ ।
ತನಿಗಿಚ್ಚೆಂದನೆ ಪಾವಕ ಪಿದ್ಯೆಯಿ ।
ನನಿಲಿಸುತಂ ಸುಡೆ ಲಂಕೆಯು ಕಂಡಾ ದಾನವವಲ್ಲಭನ ॥
ಮನಮುಂ ಮೊಗಮುಂ ಮುಳಿಯಲ್ ಪೊಗೆಯಲ್ ।
ದನುಜನನಂತಕನೀಕ್ಷಿಸಿದಪನೆಂ ।
ದೆನೆ ಕೇಸುರಿವೊಗೆಗಳ್ ಗಂಟಿಕ್ಕಿದ ಪುರ್ಬುಗಳನೆ ನೆಗೆಯೆ ॥೩೭॥

ಅಸುರನ ಕೇಡಿಂಗೊಗೆದುತ್ಪಾತ ।
ಪ್ರಸರಪಿದೆಂದೆನೆ ಧೂಮಸ್ತೋಮಂ ।
ಸರಿಸಿದುದು ತತ್ಕೇತುವೆನಲ್ ದಿಗ್ದಾಹಮೆನಲ್ ಮೂಡಿ ॥
ದೆಸೆದೆಸೆಗಾಪರಿಸುತ್ತಿರೆ ಪೊಗೆಯುರಿ ।
ಯುಸನಳಮನಿಸೆ ನೆಗೆದ ಕಿಡಿಗಳ್ ಭಾ ।
ವಿಸೆ ಪಗಲುಲ್ಕಾಪಾತಮನಾಗಿಸೆ ಕಡುಪಂ ಸುಪುತಿರ್ದಂ ॥೩೮॥

ಚರಮಸಮಯದೊಳ್ ಮಸಗುತ್ತರುಣಾ ।
ಕರ ಕಿರಣಂ ಬಳಸಿದ ಸುಬಗಿರಿಯೆನೆ ।
ತರತರದಿಂ ಕೇಸುರಿ ಮಸಗಲ್ ದನುಜೇಶನ ಕರುಮಾಡಂ ॥
ಉರಿಯುತ್ತಿರೆ ಬಾಡಬಶಿಖಿಯಿಂದಂ ।
ಪರಿವೃತಮಾದ ಸುಧಾಜಲಧಿಯೆನಲ್ ।
ಸುರರಿಪುವಿನ ರಾಣಿಯಮಾಸಂ ಬೆಂದುದು ಮನದೊಡನಾಗಳ್ ॥೩೯॥

ಬೆಳ್ಗೊಡೆ ಚಮರೀರುಹ ಸಿಂಹಾಸನ ।
ವಿಳಿರ್ವ ಪತಾಕೆಗಳುಂ ಮಕರವಿತತಿ ।
ಬಲಮುಳಿಶಂಖಂ ಭೇರಿಗಳಲ್ಲಂ ದನುಜನ ಸಿರಿಯೊಡನೆ ॥
ವಿಳಯಮನೆಯ್ದು ವೃಷಂಬಿನಮುರಿಸಲ್ ।
ಬಲಿಮುಖಚಿಹ್ನಂ ಪವನತನೂಭವ ।
ನಳಿಮುವು ಸತಿಯರ ಶೋಕಾನಳಸಿಂ ಭೂಪಾಲನ ಸಿರಿಗಳ್ ॥೪೦॥

ಪರಿಯುಳ್ಳೆಂದು ನಿಯೋಗಿಗಳೆಂಬೀ ।
ದುರಹಂಕಾರದಿ ಸಲೆ ನುಡಿದಿರಿ ವ ।
ಲ್ಲೆರಿ ಬಳಸಲ್ ಬಿಳಿತೋಡಬ್ಬ ಕರ್ಬುನ ಪೋಗದಿರೆಂಬವೊಲು ॥

ಕರವುಂ ಕುಪ್ಪಸಮಂ ಟೊಪ್ಪಿಗೆಯುಂ ।
ಸಿರವುಂ ಪಚ್ಚಡಮುಂ ಪೊಸಸೀರೆಯು ।
ಸರಸರಿಸದೆ ಕಲಿಗಳ್ ಕೇಸುರಿ ಪಿಡಿಯುಲ್ ಬಿಟ್ಟೋಡಿದರು ॥೩೨೯॥

ಭವನದ ಭುವನದ ಶಯನದ ಶಸ್ತ್ರ ।
ವ್ಯವಹಾರಂಗಳ ಕೋಶದ ಕೋಶದ ।
ದಿವಿಜಾಗಾರಂಗಳನುಕ್ರಮದಿಂ ಭಸ್ಮೀಕೃತಮಾಗ ॥
ಪವನಪ್ರೇರಿತನನಲಂ ಸಾವೋ ।
ದ್ಭವಶಾಲೆಗೆ ಬಂದವಿರಳಮದಜಳ ।
ಭವಕಾಸಾರದೊಳವಗಾಹದ ಗಜಘಟೆಯುಂ ಮಗ್ಗಿಸಿದಂ ॥೩೩೦॥

ಆಳಾನಂಗಳನೋವದೆ ಕಿಚ್ಚು.... ।
.... .ಕೆನ್ನಂ ಪಱಿಪಡೆ ಮುಱಿಯುತೆ ।
ತಾಳಗತಿಯಿನಿಭಕೋಟಿಗಳತ್ತಂ ಮುಂಪಾಸನದಿಂದಂ ॥
ಕೋಳಾಹಳಮಾಗಲ್ ಬೀಡಂ ನಿ ।
ರ್ಮೂಳಂ ಮಾಡುತ್ತುಂ ಜಲಸಿಧಿಯೊಳು ।
ಬೀಚಿಲು ನೀರಾನೆಗಳ ಸಿಸಿಮುಮೆಣುವಂ ಸುಡೆ ಲಂಕೆಯನು ॥೩೩೧॥

ಮಂದುರವುಂ ವಾಹಕರಂ ಜ್ವಲನಂ ।
ಬಂದು ಪುಗಲ್ ಮುಂಡಿಗೆಗಳು ಮುಱಿಯೆ ಕ
ರಂ ದೃಢವೆನಿಸಿದ ಪಾಳಾಸಮನಶ್ವಮುದಿಂದಂ ಪಱಿದು ॥
ಬಂಪಱೊಳೊಂದು ತೊಡದುರ್ ಬಿಸಿಲ್ಗದುರೆಗ ।
ಳಂದದೆ ಪರಿದುವು ಪುರವೀಥಿಗಳೊಳ ।
ಗಂದಬಳಾಬಾಳಕಜಾಳಕಮುಂ ಚಿಪಱಿಸಿ ಕೆದರಿಸುತ ॥೩೩೨॥

ನಿಟ್ಟೋಡಲಿನ ಸಿಡುಗೋಣಿನ ತಮಗಳ ।
ವಟ್ಟೊಟ್ಟಿಗಳೊಟ್ಟಜೆಯುಂ ಸಣ್ಣದೆ ।
ಕಟ್ಟ ಕೆದಱಿ ನಿಟ್ಟೋಟದಿ ನೋಡಲು ನಿಸ್ಸಾರಂ ಬೀಱಿ ॥
ಸುಟ್ಟಂ ಪವನತನೂಭವನಾಗಳ್ ।
ಕಟ್ಟಸುರಮಾಗಲ್ ಮುನ್ನುಗ್ರಂ ।
ಸುಟ್ಟಂ ತ್ರಿಪುರಮನೆನಲಾ ಪುರಮನನಲವಿದ್ಯಾಬಲದಿಂ ॥೩೩೩॥

ರಣಮಂಡಲದಿಂ ಪೊಱಮಟ್ಟು ತೊೞ ।
ರಣಮಂ ಕೊಂಡರಮನೆಯಿಕ್ಕೆಲದಾ ।
ಪಣಮಂ ಮಾಲಾಕಾರರ ಕೇರಿಯನರವರಿಸದೆ ಪೊಕ್ಕು ॥
ಮಣಿಗಾಱರ ಕೇರಿಯುಮಂ ಕೊಳುತುಂ ।
ಗಣಿಕಾವಾಟದೊೞೋಡುವ ಮದುಗಂ ।
ಟಣಿಯರ ಕಪ್ಪಿಕ್ಕಿದ ನರೆಮುಡಿಪಿಡಿದುದು ಲೇಸೆನೆ ಜನರು ॥೧೧೪॥

ಪಱಿಯಪಂಚಿಕೆ ದುಕೂಲ ಸುವರ್ಣಾ ।
ವಳಿ ಪಟ್ಟಾವಳಿ ನೇತ್ರಾವಳಿಯಂ ।
ಬಳಪಲ್ಲಂಕಿ ಮಗರಿ ಪೊಸಂ ಕೈದೊಡಕಿಂದಗಿಮೆಚ್ಚು ॥
ಬಿಳಿದುಪ್ಪಟಿ ರಾವಣಮೆಚ್ಚುಗಜಾ ।
ವಳಿ ಮಂಡೋದರಿಮೆಚ್ಚಿನ ಸೀರೆಯು ।
ಮೞುಗೆಗಳಂ ಬಳ್ವಳನೆ ಬಳಸಿದುದು ದೂಸಿಗರೋಸರಿಸೆ ॥೧೧೫॥

ಮಳಯಜ ಮೃಗಮದ ಕುಂಕುಮ ಹಿಮಮು ।
ಗ್ಗಳ ಕಾಳಾಗರು ಪುನುಗು ದಶಾಂಗಂ ।
ಗಳತಕ್ಕೋಲದಗಿಲ ಬಾವನ್ನದ ಸಾಂದಿನ ಪನ್ನೀರಾ ॥
ಬಳಸಿದ ಪರಿಮಳಮಂ ದೆಸೆದೆಸೆಗ ।
ಗ್ಗಳವಾಗಿರೆ ಬೀಱುತ್ತುಂ ಗಂದಿಗ ।
ರಳವಿಗಳಿದ ಕೇರಿಗಳಂ ಕೊಂಡಾಡುವವರು ಬಾಯ್ವಿಡುತೋಡೆ' ॥೧೧೬॥

ತರದಿಂ ಸಚಿವರ ಸಾಮಂತರ ಶಿ ।
ಷ್ಟರ ಬಂಧುಗಳ ವಿಶಿಷ್ಟರ ಮಾವಂ ।
ತರ ಸಾಹಣಿನಾಯಕರಂಗದ ಕಾಪಿನ ಸಾವಾಸಿಗಳ ॥
ಬಿರುದಿನ ಬೀರರ ಲೆಂಕರ ಹಡಪದ ।
ವರವಣಿಜರ ಕಾರುಕರ ಪಸಾಯಿತ ।
ರುರುತರವೆನಿಸಿದ ಕೇರಿಗಳುರಿದುವು ದಶಮುಖ ನೋಡುತಿರೆ ॥೧೧೭॥

ಇವರವರೆನ್ನದೆ ಲಂಕಾನಗರದ ।
ಹವಣುಗಳಿದ ದನುಜರ್ಕ್ಕಳಕೇರಿಗ ।
ಳವಿರಳಮೆನೆ ಬೇವಾಗಳ್ ಕಿಚ್ಚಿನ ನಾಲಗೆ ಬಹುವಿಧದಿಂ ॥

ತವಕದೆ ಭುಗಿಭುಗಿಲೆಂದೇೞುತ್ತುಂ ।
ದಿವಿಜೇಂದ್ರಾರಾತಿಯು ನೀಕ್ಷಿಪ ವ್ಯ ।
ತ್ಯುವ ಲೋಹಿತಲೋಚನದಾಬೆಳಗೆನೆ ದೆಸೆಗನ್ವೊಳಿಸುತಿರೆ ॥೩೩೮॥

ನೆೞೆ ಬೇಯುತ್ತಿರೆ ಲಂಕಾನಗರಂ ।
ತೊೞೆವಭಿಮಾನಮನೀಕ್ಷಿಸುತಿರ್ದಪ ।
ನೞಿಯದ ತೆಱದಿಂ ವಾರುಣವಿದ್ಯೆಯ ನಿಂದಾ ದಶಮುಖನು ॥
ಮಱೆದಂ ತನ್ನಯ ಭುಜಬಲದಳವಂ ।
ಮೆಱೆದಂ ಪವನಸುತಂ ಪತಿಕಾರ್ಯವ ।
ನೞಿವರೆ ಕೇಡಡಸಿದ ಕಾಲದೊಳಾರೇನಂಬರನಿಬರು ॥೩೩೯॥

ಎಲೆಲೆಲೆ ಸಾರತ್ತಲ್ ಹೊ ಹೋಹೋ ।
ತೊಲತೊಲಗಾ ಬಂದುದೆ ನಿಲು ನಿಲು ನಿಲು ।
ನಿಲು ಬುಬುಬುಬುಬುಬು ತೂತೂತೂ ನಡೆ ಹಾಹಾಹಾಯೆನುತ ।
ಸಲೆ ಜಿನಜಿನ ಶಿವಶಿವ ಹರಿಹರಿಯೆಂ ।
ದುಲಿದೋಡಿದರುರಿ ಸುತ್ತಂ ಪರ್ವಲು ।
ಬಲಿಮುಖವಂಶಿಪ್ಪಂ ಕಿಷ್ಕಿಂಧಕ್ಕಭಿಮುಖನಾದಂ ಭರದಿಂ ॥೩೪೦॥

ವಿನಯದಿ ವಿನಮಿತಮಣಿಮಕುಟಂ ಕರ ।
ವನರುಹಕುಟ್ಮಳಘಟಿತಲಲಾಟಂ ।
ಘನರೋಮಾಂಚಿತ ಗಾತ್ರಪವಿತ್ರಂ ವಿಕಸಿತಮುಖಕಮಲಂ ॥
ಇನಕುಲತಿಲಕನ ರಾಮನ ಪದಯುಗ ।
ವನಜಕ್ಕವನತನಾಗಿ ಮುಕುಂಪಂ ।
ಗನುನಯದಿ ತುೞಿಲ್ಗೆಯ್ದು ಸಮುಚಿತಾಸನದೊಳ್ ಕುಳ್ಳಿರ್ದಂ ॥೩೪೧॥

ಚೂಡಾಮಣಿಯಂ ಸಕಲನೃಪಾಲಕ ।
ಚೂಡಾಮಣಿಗೆ ವಿಯಚ್ಚರನಾಯಕ ।
ಚೂಡಾಮಣಿಯುಂ ನೀಡಿದನಾ ರಘುಕುಲರಕ್ಷಾಮಣಿಯಂ ॥
ಕೂಡೆ ತನುವಿನೊಳ್ ಪುಳಕಂಗಳ್ ತು ।
ಳ್ಕಾಡೆ ಮುದಶ್ರು ನಯನದೆ ತನು ಕುಳಿ ।
ಕೊರ್ಗಿಡೆ ರಘುಪ್ರವರಂ ನೋಡಿದನವನಿಜೆಯಂ ಕಂಡಂತೆ ॥೩೪೨॥

## ಜೈಮಿನಿಭಾರತ.

ಸಂಸ್ಕೃತದಲ್ಲಿರುವ ಮಹಾಭಾರತದ ಅಶ್ವಮೇಧ ಪರ್ವವನ್ನು ಕನ್ನಡಿಸಿ ಅನೇಕ ನೀತಿಬೋಧಕವಾಗಿಯೂ ರಸಭರಿತವಾಗಿಯೂ ಇರುವ ಇತಿಹಾಸಗಳೊಂದಿಗೆ ರಚಿಸಿದ ಈ ಗ್ರಂಥಕರ್ತೃವಿನ ಹೆಸರ ಲಕ್ಷ್ಮೀಶಕವಿ.

ಇದರ ಮೂಲಗ್ರಂಥಕ್ಕೆ 'ಜೈಮಿನಿಭಾರತ' ಎಂದು ಹೆಸರು ಬರಲು ಕಾರಣವೇನೆಂದರೆ :—

ವ್ಯಾಸಮುನಿಯು ಸಂಸ್ಕೃತದಲ್ಲಿ ಮಹಾಭಾರತ ಕಥೆಯನ್ನು ೧೮ ಪರ್ವಗಳಾಗಿ ವಿಭಾಗಿಸಿ ಬರೆದಿಟ್ಟ ಕೂಡಲೆ ಅವರ ಶಿಷ್ಯನಾದ ಜೈಮಿನಿಯು ತಾನೂ ೧೮ ಪರ್ವಗಳನ್ನು ಆ ದೇವಭಾಷೆಯಲ್ಲಿಯೇ ಬರೆದು ಗುರುವಿನ ಮುಂದಿಟ್ಟನು. ಅವರು ಅವನ್ನೆಲ್ಲಾ ನೋಡಿ ಆತನು ರಚಿಸಿದ್ದರಲ್ಲಿ ೧೪ನೆಯ ಪರ್ವವಾದ ಅಶ್ವಮೇಧಪರ್ವಮಾತ್ರ ಬಲು ಚೆನ್ನಾಗಿಯೂ ಸ್ವಾರಸ್ಯವಾಗಿಯೂ ಇದ್ದುದರಿಂದ ಅದನ್ನು ಮಾತ್ರ ಅಂಗೀಕರಿಸಿದರೆಂದು ಲೋಕದಲ್ಲಿ ಕಿಂವದಂತಿಯಿದೆ.

ಈ ಕಥಾ ಸಂದರ್ಭವನ್ನು ಅನುಸರಿಸಿ ಕನ್ನಡಕ್ಕೆ ಟೀಕಿಸಲ್ಪಟ್ಟ ಅಶ್ವಮೇಧ ಪರ್ವದ ಕಥೆಗೆ 'ಕನ್ನಡ ಜೈಮಿನಿಭಾರತ' ಎಂದು ಹೆಸರು. ಇದನ್ನು ರಚಿಸಿದ ಲಕ್ಷ್ಮೀಶಕವಿಯು ಭಾರದ್ವಾಜಗೋತ್ರದವನಾದ ಅಣ ಮಯ್ಯನೆಂಬ ಬ್ರಾಹ್ಮಣನ ಮಗನು. ಈತನು ಜನಿಸಿದ ಊರು ಅರಸಿಕೆರೆ ತಾಲ್ಲೂಕಿನಲ್ಲಿರುವ ದೇವನೂರು (ದೇವಪುರ). ಆ ಊರಿನ ಸ್ಥಳಪುರಾಣದಲ್ಲಿ ಈತನು ಹೆಬ್ಬಾರು ಶ್ರೀವೈಷ್ಣವನೆಂದು ಹೇಳಿದೆ ಸುಮಾರು ಕ್ರಿಸ್ತಾಬ್ದ ೧೬೫೭ನೆಯ ವರ್ಷವಾದ ಮನ್ಮಥ ಸಂವತ್ಸರದಲ್ಲಿ ಈತನು ಜೈಮಿನಿ ಗ್ರಂಥವನ್ನು ಬರೆದನೆಂದು ಊಹಿತವಾಗಿದೆ. ಈ ಕವಿತ್ವವು ಬಹು ರಸಭರಿತವಾಗಿಯೂ ಕಿವಿಗಿಂಪಾಗಿಯೂ ಮಧುರಶಬ್ದ ನಿಬಿಡವಾಗಿಯೂ ಉತ್ತಮವಾದ ಭಾವಗಳಿಂದ ಶೋಭಿತವಾಗಿಯೂ ಶ್ರಾವ್ಯವಾಗಿಯೂ ವಾಚಕರಿಗೆಲ್ಲರಿಗೂ ಆನಂದಕರವಾಗಿಯೂ ಇರುವುದು. ಈ ಗ್ರಂಥವನ್ನು ಓದದ ಕನ್ನಡಿಗರಿಲ್ಲ; ಇದರ ರಸಾಸ್ವಾದನೆಯಿಂದ ಆನಂದಿಸದ ವಿದ್ವಾಂಸರಿಲ್ಲ.

ಈ ಗ್ರಂಥದ ಮಾದರಿಗಾಗಿ ಇದರಿಂದ ಚಂದ್ರಹಾಸನ ಬಾಲ್ಯವೂ ವೃಷಕೇತು ಬಭ್ರುವಾಹನರ ಕಾಳಗವೂ ಉದ್ಧರಿಸಲ್ಪಟ್ಟಿವೆ.

## ವಾರ್ಧಕ ಷಟ್ಪದಿ.

### ೨೮. ಚಂದ್ರಹಾಸನಬಾಲ್ಯ.

ಇನ್ನೊರೆವೆನಾಲಿಸಾದೊಡೆ ಪಾರ್ಥಧಾರ್ಮಿಕಂ ।
ಮುನ್ನೊರ್ವನುಂಟು ಕೇರಳದೇಶವವನಿಪಂ ।
ಸನ್ನುತಗುಣೋದಯಂ ಮೇಧಾವಿಯೆಂಬವಂ ಬಲಯುತಂಬಳಿಕವಂಗೆ ॥
ತನ್ನ ಪಟ್ಟದ ರಾಣಿಯೊಳ್ ಬಹಳಭಾಗ್ಯ ಸಂ ।
ಪನ್ನೆಸೆವಂಘ್ರಿಗಱುವೆರಳಾಗಿ ದಿನದೊಳು ।
ತ್ಪನ್ನನಾದಂ ಮೂಲನಕ್ಷತ್ರದಿಂ ವರಿಷ್ಟಾಂಶದೊಳ್ ಸುಕುಮಾರನು ॥೨೪೩॥

ಪುತ್ರೋತ್ಸವಂಮಾಡಿ ಕೆಲವುದಿನಪುರೆ ನೃಪಂ ।
ಶತ್ರುಗಳ್ ಬಂದು ನಿಜನಗರಮಂ ಮುತ್ತಿದೊಡೆ ॥
ಕ್ಷತ್ರಧರ್ಮದೊಳವರೊಡನೆ ಯುದ್ಧರಂಗದೊಳ್ ಪೊಯ್ದಾಡಿಮಡಿಯೆ [ಕೇಳ್ದು ॥
ಚಿತ್ರಭಾನುಪ್ರವೇಶಂಗೈದಳಂದು ಶತ ।
ಪತ್ರಲೋಚನೆ ಪತಿವ್ರತೆಯಾಗಿ ಬಳಿಕಲ್ಲಿ ಧ । ॥೨೪೪॥
ರಿತ್ರೀಶ್ವರನ ರಾಜ್ಯಮಂ ತೆಗೆದುಕೊಂಡಹಿತರಾಳ್ದರದನೇವೇಳ್ವೆನು

ಬಳಿಕೊರ್ವ ಧಾತ್ರಿ ಶಿಶುವಂಕೊಂಡು ಪೊಱಮಟ್ಟು ।
ತೊೞಲಿ ಬೞಲುತ ಮೆಲ್ಲ ಮೆಲ್ಲನೈತಂದು ಕುಂ ।
ತಳನಗರಮಂ ಪೊಕ್ಕಲ್ಲಿ ಸಾಕಿದಳರ್ಭಕನನತಿಸ್ನೇಹದಿಂದ ॥
ಎಳೆಯಂಗೆ ಜೀವಕಾಮುದಿಲ್ಲದಿರೆ ಮಱುಗುವಳ್ ।
ಪೊೞಲೊಳಗೆ ತಿರಿದು ಪೊರೆದಬಲುವಳ್ ಮುದ್ದಿಸಿ ಪ ।
ಸುಳಿಯಭಿನಯಂಗಳ್ಗೆ ಹಿಗ್ಗಿ ಬಿಸುಸುಯ್ವಳವಳನುದಿನದೊಳಾರ್ತೆ [ಯಾಗಿ ॥೨೪೫॥

ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ ನಿನಗೆ ಪೊಂ ।
ದೊಡಿಗೆಯಿಲ್ಲೆರೆ ನಿಳಯಮಿಲ್ಲ ಬಿಡದೆಱೆವ ನೀರ್ ।
ಕುಡಿವಾಲ್ಗಳಣ್ಣೆ ಪಣ್ಗಳಿಲ್ಲ ಲಾಲಿಸಿ ನಲಿವ ತಂದೆತಾಯ್ಗಳಿಲ್ಲ ॥
ಪೊಡವಿಪತಿ ಕೇರಳಾಧೀಶ್ವರಂ ತನಯನಂ ।
ಪಡೆದನಿದಕೀಗ ನಿನ್ನಂ ನೋಡುವೆನ್ನ ಕ । [ದಿನದೊಳು ॥೨೪೬॥
ಣ್ಗೊಡೆಯದಿರದಕಟೆಂದು ಬಿಸುಸುಯ್ದಳ್ತು ಮಱುಗುವಳಾಕೆ ದಿನ

ಮೊಳೆವಲ್ಲೊಗುವ ಜೊಲ್ಲು ದಟ್ಟಡಿ ತೊದಲ್ನುಡಿಯು ।
ತೊಳತೊಳಗುತಿಹ ಸೊಬಗು ಮೆಱೆವ ನಗೆಮೊಗದ ಬಗೆ ।
ಪೊಳೆವಕಣ್ಮಿಸುಪನುಣ್ಗದಪಿನೆಣೆಚೆಲ್ವಪಣೆಕುರುಳ ಜೋಲ್ವಂಬೆಗಾಲು ॥
ಸುೞಿನಾಭಿ ಮಿಗೆ ಶೋಭಿಪಧರದೆಡೆ ಬಟ್ಟದೊಡೆ ।
ನಳಿದೋಳಡಿದ ಧೂಳಿ ಸೊಗಯಿಸುವ ವರಶಿಶುವ । [ವಳಂ ॥೩೪೭॥
ನಲಿದಾಡಿಸುವ ರೂಢಿಯಿಲ್ಲೆಂದು ನೆಱೆನೊಂದು ಮಱುಗುವಳಜಸ್ರಮ

ಬಾಲಕನ ಲೀಲೆಯುಂ ಕಂಡು ಹಿಗ್ಗುವಳೊಮ್ಮೆ ।
ಲಾಲನೆಗಳಿಲ್ಲೆಂದಱಿದು ಮಱುಗುವಳೊಮ್ಮೆ ।
ಪಾಲಿಸಿದಳಿಂತು ನಡೆನುಡಿಗಳಂ ಕಲಿವನ್ನೆಪರಿಯಂತಮಾಶಿಶುವನು ॥
ಮೇಲೆ ರುಜೆ ಬಂದಡಸಿ ವಿಧಿವಶದೊಳಾಧಾತ್ರಿ ।
ಕಾಲನರಮನೆಗೈದಿದಳ್ ಬೞಿಕ ಪಸುಳೆಗೆ ನಿ ।
ರಾಲಂಬಮಾಗಲಾಪಟ್ಟಣದೊಳೆಲ್ಲರ್ಗೆ ಕಾರುಣ್ಯಕೀಡಾದನು ॥ ೩೪೮ ॥

ಚೆಲ್ವ ಶಿಶು ಬೀದಿಯೊಳ್ ಬಂದು ದೇಶಿಕನಾಗಿ ।
ನಿಲ್ವನಂ ಕಂಡಕಂಡಬಲೆಯರ್ ಕರೆಕರೆದು ।
ಮೆಲ್ವ ಪತನಿಣ್ಣ ಕಜ್ಜಾಯಮಂ ಸಕ್ಕರೆಗಳಂ ಕೊಡುವರೆತ್ತಿಕೊಂಡು ॥
ಸೊಲ್ವ ಮಾತುಗಳನಾಲಿಸಿ ಮುದ್ದುಗೈವರವ ।
ರೊಲ್ವುದಕಮಜ್ಜನಂಗೆಯ್ಸಿ ಮುಡಿಯಂ ಪೊದಿಸಿ । [ಡನೆ ॥೩೪೯॥
ಮೆಲ್ವಾಸಿನೊಳ್ಮಲಗಿಸುವರೞ್ತಿಯಿಂದೊಸೆದು ತಮ್ಮ ಮಕ್ಕಳ್ಗಳೊ

ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ ।
ತಿರುಗುತಿಹ ಬಾಲಕನ ರೂಪಮಂ ಕಂಡು ಕರೆ । [ದಿಂದ ॥
ಕರೆದು ಭವನಂಗಳ್ಗೆ ಕೊಂಡೊಯ್ದು ಗಣಿಕೆಯರ್ ತಮತಮಗೆ ಮೋಹ
ಸರಸಪರಿಮಳಸುಗಂಧಂಗಳಂ ತೀಡಿ ಕ ।
ಸ್ತುರಿಯ ತಿಲಕವನಿಟ್ಟು ಕಮ್ಮಲರ್ಮುಡಿಸಿ ಕ । [॥ ೩೫೦ ॥
ರ್ಪೂರವೀಳೆಯಂಗೊಟ್ಟು ಮಡಿತೊಡಿಗೆಗಳಿನ್ನೈದೆ ಸಿಂಗರಿಸಿ ಕಳುಹುತಿಹರು

ಆಡುವಳಮಕ್ಕಳೊಡನಾಡುವಂ ಲೀಲೆ ಮಿಗೆ ।
ನೋಡುವಚ್ಚರಿಗಳಂ ನೋಡುವಂ ಬಾಲಕರ ।
ಕೂಡೆಮನೆಮನೆಗಳೊಳಗಾಡುತಿಹನೆಲ್ಲರ್ಗೆ ಮುದ್ದುಮೋಹಿಸುತಿರ್ಪನು ॥

ಪಾಡುವರ ನೋಡುವರ ನಾಡೆ ಸಾಧನೆಗಳಂ ।
ಮಾಡುವರ ವೆಚ್ಚಯಿಂ ಬೇಡುವರ ನೆರವಿಯೊಳ್ । ॥ ೩೫೧ ॥
ಕ್ರೀಡಿಸುವನಾಪುರದ ರೂಢಿಸಿದ ಬೀದಿಯೊಳ್ ಪಸುಳೆ ಪರಪುಟ್ಟನಾಗಿ
ಕುಂತೀಕುಮಾರ ಕೇಳಾಮಹಾಪಟ್ಟಣದೊ ।
ಳಿಂತರ್ಭಕರೊಳಾಡುತಿಹ ಪಸುಳೆಗೈದು ವ । [ಯೆಂಬ ॥
ಷ್ಟಂತುಂಬಿತಾಸಮಯದೊಳ್ಪ್ರಬಲದಿಂ ಪ್ರವರ್ತಿಪದುಷ್ಟಬುದ್ಧಿ
ಕುಂತಳೇಂದ್ರನ ಮಂತ್ರಿ ತನ್ನ ಮನೆಯೊಳ್ ವಿಪ್ರ ।
ಸಂತರ್ಪಣಂಗೈದೊಡಾದ್ವಿಜರ್ ಭೋಜನಾ । [ ॥ ೩೫೨ ॥
ನಂತರದೊಳೈದೆ ಸತ್ಕೃತರಾಗಿಕುಳ್ಳಿರ್ದು ಪರಸುತಲ್ಲಿರುತಿರ್ದರು
ಅಲ್ಲಿ ಕೆಳೆಯರೊಳಾಡುತಿರ್ದ ಶಿಶುವಂ ಕಂಡ ।
ರುಲ್ಲಾಸದಿಂದೆಸೆವ ಭೂಸುರರ್ ಬಾಲಕನ ।
ಸಲ್ಲಲಿತರಾಜಲಕ್ಷಣಕೆ ಬೆಱಗಾದರವನಂಗಮಂ ನೋಡಿನೋಡಿ ॥
ನಿಲ್ಲದನುರಾಗದಿಂದಾರ ಸುತನೀತರುಣ ।
ನೆಲ್ಲಿಂದ ಬಂದನೆಂದಾ ದುಷ್ಟಬುದ್ಧಿಯಂ । ॥ ೩೫೩ ॥
ಮೆಲ್ಲನೆವಿಚಾರದಿಂ ಕೇಳ್ದಡಾವಿಪ್ರರ್ಗೆ ನಗುತಾತನಿಂತೆಂದನು
ಈಪರಿಯೊಳನಿತಿಲ್ಲನಾಥನಾಗಿಹ ಬಾಲ ।
ರೀಪುರದೊಳತ್ತಣವನಾರ ಸುತನೆಂದಱಿಯೆ ।
ವೀಪಸುಳೆಯಂ ರಾಜಕಾರ್ಯದೊಳಗಿಹೆವದಱ ಚಿಂತೆನಮಗೇತಕೆನಲು ॥
ಆಚಾರ್ಯರೆಂದಿರ್ದಪಂ ಬಾಲ ಲಕ್ಷಣದೊ ।
ಳೀಪೊಱಲ್ಗೀಕುಂತಳಾಧೀಶನಾಳ್ವನ । ॥ ೩೫೪ ॥
ವಿಸ್ಮಾಪೂಪಗೊಡೆಯನಪನೀತನಂ ನೀಸಿರಿಸಿಕೊಂಡು ರಕ್ಷಿಪುದೆಂದರು
ಕ್ರೂರನಕ್ರಾಕುಲದೊಳಡಿಸಿರ್ದ ಪೆರ್ಮಡು ಗ ।
ಭೀರನಿರ್ಮಲಜಲದೊಳೆಸೆವಂತೆ ಮನದೊಳ್ ಕ ।
ಠೋರತರಭಾವಮಂ ತಳೆದು ಬಹಿರಂಗದೊಳ್ ವಿನಯಮುಳ್ಳಾತನಾಗಿ ॥
ಚಾರುಲಕ್ಷಣದ ಶಿಶುವಂ ನೋಡಿಧರೆಯುಬ್ಬ ।
ದಾರಕರ ನುಡಿಗೊಪ್ಪಿದವೊಲಿರ್ದು ಬೞಿಕ ಸ ।
ತ್ಕಾರದಿಂದಾವಿಪ್ರರಂ ಕಳುಹಿದಂ ದುಷ್ಟಬುದ್ಧಿ ನಿಜಭವನದಿಂದ ॥ ೩೫೫ ॥

ಈಕುಂತಳೇಂದ್ರಂಗೆ ಸುತರಿಲ್ಲ ರಾಜ್ಯಮೀನ |
ಗೇಕಾಧಿಪತ್ಯಮಾಗಿರ್ದಪುದು ಮುಂದಿವಂ |
ಭೂಕಾಂತನಾದಪಂ ಗಡ ವಿಪ್ರರೆಂದ ನುಡಿತಪ್ಪದೆನ್ನಾತ್ಮಜಂಗೆ ॥
ಬೇಕಾದ ಸಂಪದಂ ಬಯಲಾಗಿ ಪೋಪುದೆಂ |
ದಾಕುಮತಿ ಬೇಱೊಂದುಪಾಯಮಂ ಚಿಂತಿಸಿ ಭ |
ಯಾಕಾರದೊಡಲ ಚಂಡಾಲರಂ ಕರೆಸಿ ಬೆಸಸಿದನಾರುಮಱಿಯದಂತೆ [ ॥೩೫೬॥

ಕಾನನಾಂತರದೊಳೀತರಳನಂ ಕೊಂದು ನೀ |
ವೇನಾದೊಡಂ ಕುಱುಪ ತಂದೆನಗೆ ತೋರ್ಪುದೆಂ |
ದಾನರೇಂದ್ರನಮಂತ್ರಿ ಬೆಸಸಿದೊಡೆ ಪಶುಘಾತಕಿಗಳಾಡುತಿಹ ಶಿಶುವನು ॥
ಹೀನದಯದಿಂದ ಪಿಡಿದೆತ್ತಿಕೊಂಡೊಯ್ದರ್ ಭ |
ಯಾನಕದಲಿಂದು ಕೊಲೆಗೆಳಸಿ ಪ್ರಹ್ಲಾದನಂ |
ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರ್ ಬಂದು ಕೈದುಡುಕುವಂತೆ ॥೩೫೭॥

ಪಾತಕಿಗಳೊಡಲೊಳಿಹ ಪರಮಾತ್ಮನಂತೆ ಯಮ |
ದೂತರೆಳತಂದಜಾಮಿಳನಂತೆ ಕಾಕಸಂ |
ಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ ನಲುಗಿ ಕತ್ತಲೆಯೊಳಿರ್ದ ॥
ಶೀತಳಮರೀಚಿಲಾಂಛನದಂತೆ ಬಹಳ ಕೋ |
ಪಾತಿಶಯದೊಳಗಿಹ ವಿವೇಕದಂತಾಗ ಪಶು |
ಘಾತಕಿಗಳೆತ್ತಿಕೊಂಡೊಯ್ವ ಬಾಲಕನಿರ್ದನವರೆಡೆಯೊಳಂಜುತಂಜುತ ॥

ಪೆಗಲೊಳೇರಿಸಿ ಬಸಕೆ ಚಂಡಾಲರೊಯ್ಯುತಿರೆ
ಮಿಗೆ ಬೆದಱಿ ಭಯದಿಂದ ಬಾಲಕಂ ಬಾಯೊಳಾ |
ವಗಮಿರಿಸಿಕೊಂಡಿರ್ದ ದಿವ್ಯಸಾಲಗ್ರಾಮಮಂ ಪಲಪತಿಮುಹಿಮೆಯಿಂದ ॥
ಬಗೆದೋರಲಾಗ ಮುರಹರ ಕೃಷ್ಣ ಕಮಲಾಕ್ಷ |
ಖಗರಾಜಗಮನ ಸಲಹೆಂದು ಚೀರಿದೊಡವನ |
ಮೊಗನೋಡಿ ಕರುಣದಿಂ ಕಟುಕರೆದೆ ಕಱಗಿದುದದೆಂತೊ ಪರಿಣಾಮ
[ದೇಸ್ಗ ॥೩೫೮॥

ಬಯ್ದು ಪಸುಳೆಯನರಣ್ಯದೊಳಿರಿಸಿ ಮಱುಗಿ ಬಿಸು |
ಸುಯ್ದು ಪಶುಘಾತಕಿಗಳಾ ದುಷ್ಟಬುದ್ಧಿಯಂ |
ಬಯ್ದು ಶಿಶುವಧೆಗಳುಕಿ ನಿಂದು ನೋಡುತ ಕಂಡರರ್ಭಕನೆಡದಕಾ
|ಲೊಳಾಱು ॥

ಅಯ್ದಲ್ಲದೊಂದು ಬೆರಳಿರ್ಪುದಂ ಬೞಿಕದಂ ।
ಕೊಯ್ದು ಕುಱುಹಂ ಕೊಂಡು ತಮ್ಮ ದಾತಾರನೆಡೆ ।
ಗೆಯ್ದಿ ತೋಱಿದೊಡವನವರ್ಗಳಂ ಮನ್ನಿಸಿ ಮಹೋತ್ಸವದೊಳಿರು
[ತಿರ್ದನು ||೩೫೮||

ಬಸಿವನೆತ್ತರ ಗಾಯದೆಡದಡಿಯ ವೇದನೆಗೆ ।
ಪಸುಳೆ ಹರಿಹರಿಯೆಂದೊಱಲ್ದುಱುತಿರಲ್ ಕಣ್ಣೊ ।
ಳುಸರ್ಪಬಾಷ್ಪಂಗಳಂಕಂಡುಮಿಗೆಪಕ್ಕಿಗಳ್ನೊಂದುಕಡುಶೋಕ
[ದಿಂದ ||

ಪಸವು ಸೀರಡಿಕೆಯುಂ ತೊಱೆದಲ್ಲಿ ಸಿಂದುಪಚ ।
ರಿಸುತಿರ್ದುವಾಶಿಶುವನೆಂದೊಡೆಲೆ ಪಾರ್ಥ ಕೇಳ್ ।
ವಸುಮತಿಯೊಳಾರ್ತರಂ ನೋಡಿ ಮಿಗೆ ಮಱುಗದಿಹ ಮಾನವಂ ಪಾಪಿ
[ಯಲ್ತೆ ||೩೬೦||

ಗಱಿಗೆದಱಿ ಕೊಡೆವಿಡಿದು ಸಿಂದುವು ಬಿಸಿಲ್ಗೆ ನವ ।
ಱೆಕೆಯುಂ ಬೀಸಿ ಬಿಜ್ಜಣವಿಕ್ಕಿ ತಂಚಕ ತುಂ ।
ತುಂರಸುದುರ್ಚಿತು ಸಾರಸಂ ಸಲಿಲದೊಳ್ ನೆನೆದು ಪಕ್ಕಂಗಳಂಬಿದಿರ್ಚಿ||
ಮಱುಗಿ ಮುಲ್ಕಿಡಿಯಲುಪಚರಿಸಿದುವು ಗಿಳಿಗಳ್ ।
ಕ್ಕಱೆಯೊಳಿಗಳರ್ಭಕನ ರೋದನದ ಕೂಡೞುವ ।
ತೆಱದೊಳ್ ಮೊರೆದುವಲ್ಲಿ ಕಱುಬರಿದ್ದೊರಿಂದ ಕಾಡೊಳ್ಳೆತೆನಿಸುವಂತೆ ||

ನಿಲ್ಲದೆ ನರಳ್ವ ಪಸುಳೆಯ ನಿರ್ಮಲಾಸ್ಯಮಂ।
ಪುಲ್ಲೆಗಳ್ ಕಂಡು ಕಾನನಕೆ ಕಾಮಿಸಿ ತಮ್ಮ ।
ನಲ್ಲಸ್ಮೃತರಲುಮ್ಮಳಿಸಿ ವಾಹನವನಱಸಬಂದ ಪೂರ್ಣೇಂದುವೆಂದು ||
ವಲ್ಲಭಸ್ವಾಮಿಯುಂ ಬೇಡಿಕೊಳುತಿರ್ದವನೆ ।
ಮೆಲ್ಲಮೆಲ್ಲನೆ ಪೊರೆಗೆ ಪೊದ್ದಿ ಬಾಲಕನಂಘ್ರಿ ।
ಪಲ್ಲವದ ರುಧಿರಮಂ ಕುಡುನಾಲಗೆಗಳಿಂದ ಸವಿದು ಲೇಪಂಗೈದುವು||೩೬೨

ಕೋಗಿಲೆಯ ಸಿಡುಸರಂ ಪಾರಿವದ ಕಲ್ಲುಣಿಸು ।
ಗೂಗೆಗಳ ಕಣ್ದೊಳಸು ಬಕನ ಮೌನದ ಬೆಱಗು ।
ನಾಗದ ನಿರಾಹಾರಮಳಿಗಳ ಪರಿಭ್ರಮಣಮಿಭದ ಸೀತ್ಕಾರಂಗಳುಂ ||
ಪೋಗಲಡಿಯಿಡಲರಿಯದಾರ್ತ್ಯವ ಜನಮಿಲ್ಲ ।
ದಾಗಹನ ಗಹ್ವರದೊಳೞುವ ಶಿಶುವಂ ನೋಡ ।
ಲಾಗಿಬಂದೆಡೆಗೊಂಡ ದುಃಖಾತಿರೇಕವೆಂಬಂತೆ ಕಾಣಿಸುತಿರ್ದುದು||೩೬೩

ದಿನಪನುಪಟಳದಿಂದ ನೆಲೆಗೆಟ್ಟು ಪಲವು ರೂ |
ಪನೆತಾಳ್ದು ವನದೊಳೆಸದುರುತಪದ ಸಿದ್ಧಿಯಂ |
ಘನತೆಯಂ ಪಡೆದುಮಿಗೆಪಗೆಯಾದಪಗಲಂ ತೋಱಗಿಪಂಧಕಾರಮೆನಲು||
ಅನುಪಮದ ಕಾರೊಡಲ ಬೇಡಪಡೆ ಬೇಂಟೆಗೆ ವಿ |
ಪಿನದೊಳ್ಕೈತರುತಿರ್ದುದಬ್ಬರದ ಬೊಬ್ಬೆಗಳ |
ನಿನದದಿಂ ಜೀವಿಗಳ ಕೊಲೆಗೆಳಸಿದಂತಕನ ದೂತ ಸಂಘಾತದಂತೆ||೩೬೪

ತಪ್ಪತಪ್ಪಲೊಳಲ್ಲಿಗಲ್ಲಿ ಮಂಜುಗಳಸೆಪ |
ಕಪ್ಪಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ |
ಬಪ್ಪಬಪ್ಪೆಳನಾಯ್ಗಳಂಹಾಸೊಳಾಂತುಬಂದುದುಶಬರಸೇನೆಬಳಿಕ ||
ಸೊಪ್ಪುಸೊಪ್ಪುಗಳ ಮೆಳೆಮೆಳೆಗಳಂ ಸೋವುತ್ತ |
ತಪ್ಪ ತಪ್ಪದೆ ಶರಶರಂಗಳಂ ತೆಗೆದೆಚ್ಚು |
ತೊಪ್ಪತೊಪ್ಪನೆ ಮೃಗಮೃಗಂಗಳಂ ಕೆಡಹಿದರ್ಕಾನನದೊಳೇವೇಳ್ವೆನು||

ಇದೆ ಪಂದಿ ಕೆದರಿದ ನೆಲಂ ನೋಡಲಿದೆ ದಂತಿ |
ಕದಡಿದ ಕೊಳಂ ತೋಱಲಿದೆ ಪುಲಿಯುಗಿದ ಮೃಗದ |
ಮೆದುಳತ್ತಲಿದೆಸಿಂಗಮುಱಿಗಿದಾನೆಯ ತಲೆಯುಮುತ್ತುದುಱಿನೆತ್ತರೊಡನೆ ||
ಇದೆ ವನಮಹಿಷನುದ್ದಿಕೊಂಡ ಮರದಿಗುಡಿತ್ತ |
ಲಿದೆಕೊ ಸಾರಂಗಮಿಕ್ಕಡಿಗೃದ ಪಾಪಿತ್ತ |
ಲಿದೆ ಪುಲ್ಲೆಗಳ ಪಕ್ಕಮರೆಗಳಿಕ್ಕೆಗಳೆಂದು ಪರಿದರ್ ಪುಳಿಂದರಂದು||೩೬೬

ನಡೆ ಪಜ್ಜೆವಿಡಿ ಪೋಗು ತಡೆ ನಿಲ್ಲು ಜಡಿ ಬೊಬ್ಬೆ |
ಗೊಡುಪೊದಱೊಳಡಗು, ಕೈಗೆಡದಿರಿಸು ನಿಡುಸರಳ |
ತೊಡುಕೆಲಕೆ ಸಿಡಿಯದಿರ್ಪೊಡೆ ಸಾರ್ಚು ತುಡುಕುವೊಗಸಡಗುಮರ
[ಕಡರೊಪರ್ಚು ||
ಅಡಗಿಪೊಯ್ ಜಡಿ ಕೋಲನಿಡು ಮುಂದುಗಡೆ ನಾಯ |
ಬಿಡು ಕೂಡೆ ಪಡಿತಳಿಸು ಸೆಡೆಯದಿರ್ ಕೆಡಪೆಂಬ |
ನುಡಿಗಳಡಿಗಡಿಗೆ ಕಿವಿಗಿಡಿದುದೆಲ್ಲೆಡೆಯೊಳಂದಡವಿಯೊಳ್ಕಡುಪೊಸತೆನೆ ||

ಉಬ್ಬಿದುದೇಱಿದಗೆದೊಡಲ ಬಾಗಿದ ಬೆನ್ನ |
ಹಬ್ಬುಗೆಯ ಪಚ್ಚಳದ ಸೆಳೆದ ಬಾಲದ ಕೊನೆಯ |
ಕೊಬ್ಬಿದಕೊರಳ ಸಣ್ಣಜಂಘೆಗಳ ಕೊಂಕುಗುರ ಮಡಿಗಿವಿಯ ಕಿಡಿಗಂ
[ಗಳ ||

ಹೆಬ್ಬುಲ್ಲ ಬಿಡುವಾಯು ಜೋಲ್ವ ಕೆನ್ನಾಲಗೆಯು ।
ಗಬ್ಬಿನಾಯ್ಗಳ ಘಾಸನುಗಿದು ಬಿಡೆ ಪಂದಿಗಳ್ ।
ನಬ್ಬರಿಸಿತುಡುಕಿದುವುಕೇಸರಿಗಡರ್ದು ಮೇಲ್ವಾಯ್ದು ಪುಲಿಯುಂ ಕೊಂ
[ದುವು ॥೨೬೮॥

ಬಿಡದೆ ಕುತ್ತುಗರ್ಗಳಂ ಸೋವಿದರ್ ತೀವಿದರ್ ।
ಗಿಡುಗಳ್ ಪೊದರ್ಗಳಿಂದೆಬ್ಬಿಸಿದರಬ್ಬಿಸಿದ ॥
ರೊಪನೊಡನೆ ಖಗಮೃಗವ್ರಾತಮಂ ಘಾತಮಂ ಮಾಡಿದರ್ ಕೂಡೆಕೂಡೆ॥
ಪಿಡಿಗುಂಡು ಬಡಿಕೋಲುಳಿರುಬೆಯಿಂದುರುಬೆಯಿಂ ।
ದಿಡುವರಣೆ ನೇಣುರಲ್ಗೊಲೆಗಳಿಂ ಬಲೆಗಳಿಂ ।
ಜಡಿದಾರ್ದುಬೊಬ್ಬೆಯುಬ್ಬರದಿಂದ ಶರದಿಂದ ಕಾಡೊಳ್ ಕಿರಾತರಂದು॥

ಪುಲಿಕರಡಿಸಿಂಗಸಾರಂಗಮರೆಪಂದಿಗಳ್ ।
ಮೊಲಹುಲ್ಲೆ ಕಾಡೆಮ್ಮೆಚಮರಿಗಳ್ ಮೊದಲಾದ ।
ಪಲವು ಮೃಗಜಾತಿಯುಂಕ್ರೌಂಚಶಿಖಿತಿತ್ತಿರಿಕಪೋತಾದಿಪಕ್ಷಿಗಳನು ॥
ಕೊಲುತಬಹ ಬೇಡರ್ಗೆ ಸಿಕ್ಕದೋಡಿದುದೊಂದೆ ।
ರಳ ಕುಳಿಂದಕನೆಂಬ ದೊರೆ ಕಂಡು ತನ್ನ ಚಾ ।
ಪಲಹಯದೊಳಡರಿ ಬೆಱಸಂದನತಿವೇಗದಿಂ ಬಿಲ್ವಿಡಿದು ಕೊಲ್ವೆನೆಂದು ॥

ಆ ಕುಳಿಂದಂ ದುಷ್ಟಬುದ್ಧಿಯು ನಿಯೋಗದಿಂ ।
ದಾಕಾನನದ ನಾಡ ವಳಿತಮಂ ಕೈಕೊಂಡು ।
ಭೂಕಾಂತನಾಗಿಹಂ ಚಂದನಾವತಿಯೆಂಬ ಪುರದೊಳವನಟ್ಟಿಯಿಂದ ॥
ಈ ಕಿರಾತಪ್ರಕರದೊಡನೆ ಪೊಱಮಟ್ಟು ಮೃಗ ।
ಯಾಕಾಮನಾಗಿ ಬಂದಿರ್ದವಂ ಪಿಡಿದೋಡು ।
ವಾಕುರಂಗದ ಬೆನ್ನನೈದಿದಂ ತೇಜಿಯು ಜವಂ ಗಾಳಿಯುಂ ಮುಂಚಲು ॥

ಹರಿಣನಂ ಬೆಂಬತ್ತಿ ಬರಲಾಕುಳಿಂದಕಂ ।
ಹರಿಯನೇ ಜಪಿಸುತಱುತಿಹ ಬಾಲನಂ ಕಂಡು ।
ಹರಿಯನಲ್ಲಿಯೆ ನಿಲಿಸಿ ನೋಡಿ ನಿಜಶಿರವನಲ್ಲಾಡಿತಾಂ ಮೃಗದ ಕೊಲೆಗೆ ॥
ಹರಿತಂದ ಪಾಪಮತಿಪುಣ್ಯವೊದವಿಸಿತು ಸುಪಿ ।
ಹರಿಸುವೊಡೆ ಶಿವಶಿವಾ ಪೊಸತೆಂದು ಹರುಷದ ಲ ।
ಹರಿಯೊಳೋಲಾಡಿದಂ ಕಡವರವನೆಡಹಿ ಸಂಧಿಸಿದ ಕಡುಬಡವನಂತೆ॥

ಇಳಿದು ನಿಜವಾಜಿಯಂ ಸಾರ್ದು ಮೈದಡವಿ ಬರೆ |
ಸೆಳೆದು ಬಿಗಿಯುಪ್ಪಿ ಕಂಬನಿದೊಡೆದು ಕೂಡೆ ಸ |
ಗ್ಗಳೆಯ ನೀರಿಂದ ಕಾಲ್ವಡಿಯೊಳ್ಬಸಿವನೆತ್ತರಂ ತೊಳೆದು ಮೋಹದಿಂದ॥
ಗಳದೊಳುಬ್ಬುವ ಗದ್ಗದಂಗಳಂ ನೈಪಿಟ್ಟು ॥
ತಿಳುಪಿ ಲಾಲಿಸಿದಂ ಕುಳಿಂದಕಂ ಸೌಭಾಗ್ಯ |
ನಿಳಯದೆಱಕೆಯ ನಸುನೊನಪಿದಗ್ಗದಪುಣ್ಯದೊಡಲನವನಾಶಿಶುವನು॥

ಎಡಬಲದೊಳಿಹ ತನ್ನವರೊಳಾಕುಳಿಂದಕಂ |
ನುಡಿಗನೀಬಾಲಕಂ ತನ್ನ ತಾಯ್ತಂದೆಗಳ |
ನೊಡಹುಟ್ಟಿದವರ ಹಂಬಲಿಸದೆ ಮುರಾರಿಯಂನೆನೆನೆದಱಿಂದಿವಂಗೆ ॥
ಒಡೆಯನಚ್ಯುತನಾದಕಾರಣಂ ಮೃತನಾಗ |
ನಡವಿಯೊಳ್ ಜೀವಿಸಿದನೆಲ್ಲರ್ಗೆ ತನುಜರಂ |
ಕೊಡುವವಂ ಕೃಷ್ಣನೈಸಲೆ ತನಗೆ ಮಕ್ಕಳಿಲ್ಲೀತನೇ ಸುತನೆಂದನು॥೨೭೪

ಮೃಗಯಾವ್ಯಸನದಿಂದ ಕಾನನಕೆ ತಾಂ ಕೃಷ್ಣ |
ಮೃಗದ ಕೂಡೈದಿದೊಡೆ ದೊರೆಕೊಂಡನೀ ಕೃಷ್ಣ |
ಮೃಗಭಾವದರ್ಭಕಂ ಪಾಪಕೆಳಸಿದೊಡಾಯ್ತು ಪುಣ್ಯಮನುತಲ್ಲಿಮಡಿವ|
ಮೃಗಜಾತಿಗಳನವರವರ್ಗೆ ಪಚ್ಚಿಸಿ ನೆರೆದ |
ಮೃಗಜೀವಿಗಳನೆಲ್ಲರಂ ಕಳುಹಿ ನಿಜಪುರಕೆ |
ಮೃಗಧರನೊಲಿಸೆವಿಶಿಶುವಂ ಕೊಂಡು ಪರಿಜನದೊಡನೆ ಬಂದನುತ್ಸವ
[ದೊಳ್. ೨೭೫॥

ಮುಂದೆ ಪರಿತಂದು ಚಾರರಱಿಪೆ ಸಿಂಗರಿಸಿದರ್ |
ಚಂದನಾವತಿಯ ಸಂಭ್ರಮದಿಂ ಕುಳಿಂದಕಂ |
ಬಂದು ನಿಜಭವನಮಂ ಪೊಗಲಿದಿರ್ವಂದು ನಲಿದವನ ಸತಿ ಮೇಧಾವಿನಿ ॥
ಕಂದನಂ ತೆಗೆದೆತ್ತಿಕೊಳುತ ಬಿಗಿಯುಪ್ಪಿ ಸಾ |
ನಂದದಿಂ ಪೊರೆಯೇಱಿದಳ್ ತನ್ನ ಬಂಜೆತನ |
ಮಿಂದು ಪೋದುದು ಪುತ್ರವತಿಯಾದೆನೆನ್ನ ಪುಣ್ಯದ್ರುಮಂ ಫಲಿಸಿತೆಂದು॥

ಬೞಿಕ ನಗರದೊಳಾದುದುತ್ಸವಂ ಪೌರ್ವರ್ಗೆ |
ನಿಳಯದ ಸಮಸ್ತವಸ್ತುಗಳನೊಲಿದಿತ್ತನೊಂ |
ದುೞಿಯದೆ ವಿದಿತಜಾತಕರ್ಮಮಂ ಮಾಡಿಸಲ್ಬುಧರುತ್ತರೋತ್ತರವನು॥

ತಿಳಿದು ನಿರ್ಮಲಮುಖಾಂಬುಜದಿಂ ಶಶಾಂಕನಂ ।
ಕಳಕಳಿಸಿ ನಗುವೆನದಱಿಂ ಚಂದ್ರಹಾಸನಂ ।
ದಿಳೆಯೊಳೀತಂಗೆ ಪೆಸರಾಗಲೆಂದುಚ್ಚರಿಸಿ ನಾಮಕರಣಂಗೈದರು ॥೩೩॥

ಕತ್ತಲೆಯಮನೆಗೆ ಮಣಿದೀಪವಾದಂತೆ ಸಲೆ ।
ಬತ್ತಿದ ಸರೋವರಕೆ ನವಜಲವೊದವಿದಂತೆ ।
ಬಿತ್ತರದ ಕಾವ್ಯರಚನೆಗೆ ದೇವತಾಸ್ತುತಿ ನೆಗಳ್ದಂತೆ ಭೂತಳದೊಳು॥
ನುತ್ತೆ ಸಂತಾನವಿಲ್ಲದ ಕುಳಿಂದನಬಾಳ್ಕೆ ।
ಗುತ್ತಮಕುಮಾರನಾದಂ ಚಂದ್ರಹಾಸನೆನ ।
ಲುತ್ತರೋತ್ತರಮಪ್ಪುದಚ್ಚರಿಯೆ ಸುರಪುರದ ಲಕ್ಷ್ಮೀವರನ ಭಕ್ತರು॥

---

ವಾರ್ಧಕಷಟ್ಪದಿ.

## ೨೯ ವೃಷಕೇತು ಬಭ್ರುವಾಹನರ ಕಾಳಗ.

ಪೇೞಲೇನಹುದಿನ್ನು ಬಭ್ರುವಾಹನನೊಡನೆ ।
ಕಾಳಗಂಗೊಡುವೆನಾಂ ಕುಲಕೆ ಮಗನೀನೊರ್ವ ।
ಬಾಳುವೆಗೆಡಿಸಬೇಡ ಗಜಪುರಕೆ ಪೋಗಿ ಮುರಹರಧರ್ಮನಂದನರ್ಗೆ॥
ಕಾಳಾದ ರಾಜಕಾರ್ಯಸ್ಥಿತಿಯ ನೆಚ್ಚಱಿಸು ।
ಕೇಳಿನ್ನು ಮಾತನೆಂ ದರ್ಜುನಂ ನುಡಿಯಲ್ಕೆ ।
ತಾಳದೆ ವೃಷಧ್ವಜಂ ಕೋಪದಿಂ ಪಾರ್ಥಂಗೆ ಕೈಮುಗಿಯುತಿಂತೆಂ ॥
[ದನು ॥೩೮॥

ಒಳ್ಳಿತಿದು ತಾತ ನಿನ್ನಂ ಬಿಟ್ಟು ನಾಂ ಪೋಗ ।
ಲುಳ್ಳವನೆ ಗಜನಗರಿಗಕಟ ರಣದೊಳ್ ಜೀವ ।
ಗಳ್ಳನಾದೊಡೆ ಮತ್ಪಿತಾಮಹಂ ಬೀೞದಿರ್ದಪನೆ ಗಗನಾಗ್ರದಿಂದ ॥
ಹೊಳ್ಳರ್ದೆಯ ಹೊಱಬಿಗರೊಳಂಬುದೀ ನುಡಿಗಳಂ ।
ತಳ್ಳಂಕದಿಂದ ನೀನಾಹವದೊಳಿಂತೆಣಿಕೆ ।
ಗೊಳ್ಳಲೇಕಿವನ ಬಿಂಕಮನೀಗ ಮುಱಿವೆನೆನ್ನಂ ಕಳುಹಿ ನೋಡೆಂದನು।

ಮಂದಿಸಹಿತೀ ಬಭ್ರುವಾಹನಂ ಬರಲಿ ನಾ |
ನಿಂದು ರಣದೊಳ್ ನಿನ್ನ ಕಣ್ಗಳ್ಗೆ ಹಬ್ಬಮಂ |
ತಂದಲ್ಲದಿರೆನೆಂದು ವೃಷಕೇತು ಬಲ್ಪಿಂ ಧನಂಜಯಂಗೆಱಗಿ ಬೞಿಕ ||
ಪೊಂದೇರ್ಗಡರ್ದು ನಿಜಚಾಪಮಂ ತುಡುಕಿ ನರ |
ನಂದನನ ಸಮ್ಮುಖಕೆ ನಡೆತಂದು ನುಡಿದನೆಲೆ |
ಮಂದಮತಿ ಪಾರ್ಥಸುತನಹಡೆ ನಿಲ್ ಕರ್ಣಜಂ ತಾನೆನುತ ತೆಗೆದೆಚ್ಚನು|| ೭೮

ಲೇಸನಾಡಿದೆ ಕರ್ಣಸುತನಾದಡೊಳ್ಳಿತ್ತೈ |
ವಾಸಿಯುಳ್ಳವನಪ್ಪೆ ಫಲುಗುಣಂ ಕೊಂದನ |
ಲ್ಲಾಸಮರದೊಳ್ ನಿನ್ನ ತಾತನಂ ತನಗೆ ನೀನಿದಿರಪ್ಪುದುಚಿತಮೆನುತ ||
ಸೂಸಿದಂ ಕಣೆಗಳಂ ಬಭ್ರುವಾಹನನದಂ |
ನೇಸಱುಗನ ಸುತಂ ಬಱಿಕ್ಯೆದು ಪಾರ್ಥಿಯಂ |
ಗಾಸಿಮಾಡಿದನಂಬುಗಳಮೞೆಯೊಳವನೀತನಂ ಮುಸುಕಿದಂ ಶರದೊ
[ಳಂ ||೭೯||

ಇಸುವರೆಚ್ಚಂಬುಗಳನಡೆಯೊಳಿಕ್ಕಡಿಗೈವ |
ಏಸುವರೋ ರೊರ್ವರಂ ಗಾಯಗಾಣಿಸಿ ಕೆರ |
ಳ್ದಿಸುವರಶ್ವಧ್ವಜವರೂಥಸಾರಥಿಗಳಂ ತಱಿದಿಳಗುರುಳ್ಚಿ ಕೂಡೆ ||
ಇಸುವರೊರ್ವೊರ್ವರ್ ಮೆಯ್ಮುಱಿದು ಚೇತರಿಸಿಕೊ |
ಣ್ಡಿಸುವರಾಗ್ನೇಯಾದಿ ದಿವ್ಯಾಸ್ತ್ರನಿಕರದಿಂ |
ದಿಸುವರಿಂತವರವರ ಸರಿಸು ಬಾಣಂಗಳಂ ಕರ್ಣಸುತಪಾರ್ಥಸುತರು ||

ಅಂದಾದಕರ್ಣಾರ್ಜುನರ ಕಾಳಗವನವರ |
ನಂದನರ್ ನಿರ್ಣಯಿಸುತಿರ್ದರೆನೆ ಶಸ್ತ್ರಾಸ್ತ್ರ |
ದಂದ ಶರಸಂಧಾನಸತ್ವಸಾಹಸಲಕ್ಷ್ಯಲಳಿಲಾಘವಂಗಳಿಂದ ||
ಮುಂದುವರಿವಗ್ಗಳಿಕೆ ಮುಳಿಸು ಮೂದಲೆ ಮೋಡಿ |
ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗ |
ಳಿಂದ ಸಮಮಾಗೆ ಕೈದೋಱಿದಂ ವೃಷಕೇತು ಬಭ್ರುವಾಹನನ ಮೇಲೆ ||

ಬೞಿಕಖಿಳದಿವ್ಯಾಸ್ತ್ರದಿಂದ ವೃಷಕೇತು ವೆ |
ಗ್ಗಳಿಸೆ ಬಾಡಬವೈಷ್ಣವದೊಳದಂ ಪರಿಹರಿಸಿ |
ಕೊಳುತರ್ಜುನಾತ್ಮಜಂ ಕೆರಳ್ದವನನೆಚ್ಚೊಡುಚ್ಚಳಿಸಿತಚ್ಛೋಣಿತ
[ವನು ||

ತೊಳ್ಯಲಿಟಿದುವು ಭೋಗವತಿಯು ಜಲಕಂಬುಗಳ್ !
ಮುಳಿದು ಕರ್ಣಜನಿಸಲ್ಕಾತನಂ ಸುತ್ತಿಸಿತು ।
ಸುಟಿಗಾಳಿಯಂದದಿಂ ಕಣೆಗಳರೆಗಳಿಗೆಪರ್ಯಂತವಾಸಂಗರದೊಳು ॥

ಮತ್ತೆಹೊಡಕರಿಸಿ ಪಾರ್ಥನ ಸೂನು ರೋಷಾಗ್ನಿ ।
ಪೊತ್ತಿಕಿಡಿಗೆದಱೆ ದಿವ್ಯಾಸ್ತ್ರವಂ ಪೂಡಿ ತೆಗೆ ।
ಯುತ್ತೆಲವೊ ಕರ್ಣಸುತ ನೀನೆ ಱಿಲ್ಲಾಳಪ್ಪೆನಾಂಪೊಣರ್ದತಿಬಲರೊಳು ॥
ಚಿತ್ತಚಂಚಲವಿಲ್ಲದೀಕ್ಷಿಸೆನುತೆಚ್ಚೊಡೆದೆ ।
ಗೆತ್ತಿಶರವಂ ಕೂಡೆ ಪಿಡಿದಾಗಸಕ್ಕೆ ಚಿಗಿ
ದೆತ್ತಿಕೊಂಡೊಯ್ದುವೃಷಕೇತುವಂ ತಿರುಗಿಸಿತು ದೆಸೆದೆಸೆಗಳಂ ನಭ
[ದೊಳು ॥೩೮೬॥

ಭಾನುಸುತಸೂನುವಂ ನಭಕೆತ್ತಿ ಕೊಂಡೊಯ್ದು ॥
ನಾನಾದೆಸೆಗೆ ತಿರುಗಿಸಿತು ಮುಹೂರ್ತತ್ರಿತಯ ।
ಮೀನೆಲಕೆ ಕೆಡಪದೆ ಮಹಾಶರಂ ಕೆಳಗೆ ಬಿಸ್ಸುಡಿದು ಸನ್ನದ್ದರಾಗೆ ॥
ಈನರನುವಾಬಭ್ರುವಾಹನನು ಮೊಡನ್ನೆದೆ ।
ಬಾನೆಡೆಯೊಳಾತನ ಪಿತಾಮಹಂಗಭಿನ ಸಿ ।
ಕಾನನಸರಿತ್ಸಾಗರಂಗಳೊಳ್ ಬೀಟಿಪಟಿದಂ ಮಣಿಪುರದಮಹಿಯೊಳು ॥

ಮೊಗವೆತ್ತಿ ಫಲುಗುಣಂ ನೋಡುತಿರೆ ಕರ್ಣಜಂ ।
ಗಗನದಿಂ ಬಿದ್ದಿಳೆಗೆ ಪೊಡೆಚೆಂಡಿನಂತೆ ಪುಟ ।
ನೆಗೆದೆದ್ದುರೋಷದಿಂ ಘುಡಿಘುಡಿಸಿ ಪಾರ್ಥಸುತನಂ ಪಚಾರಿಸಿ ಕನಲ್ದು ॥
ತೆಗೆದಿಸಲ್ಬಾಣಂಗಳಶ್ವಸಾರಥಿಪತಾ ।
ಕೆಗಳಿಂದಮರ್ದ ರಥಸಹಿತ ಚಿತ್ರಾಂಗದೆಯ ।
ಮಗನಂ ನಭಸ್ಥಳಕೆ ಕೊಂಡ್ಡಡರ್ದವು ನಾಕಪರಿಯಂತವಾಕ್ಷಣಾ
[ದೊಳು ॥೩೮೮॥

ನಭದೊಳತ್ಯುಗ್ರದಿಂ ತಪಿಸುವ ದಿವಾಕರ ।
ಪ್ರಭೆಯಿಂದುರಿಯೆ ರಥಂ ಬಿದ್ದನುರ್ವಿಗೆ ಪಾರ್ಥಿ ।
ರಭಸದಿಂ ಪೂರ್ವದೊಳ್ಡರ್ದ ಸಂಪಾತಿ ಗರಿಸೀದಿಳೆಗೆ ಬೀಟುವಂತೆ ॥
ತ್ರಿಭುವನಕೆ ಪೊಸತಾಗೆ ಕರ್ಣಜಂ ಮತ್ತೆರಿಪು ।
ಸುಭಟನಂ ಮೂಱುಬಾಣದೊಳೆಚ್ಚು ದಿವಸವ ।
ಲ್ಲಭನ ಮಂಡಲದಲ್ಲಿಗೈದಿಸಿ ಪಚಾರಿಸಿ ಜಱೆದು ಕೂಡೆಬೊಬ್ಬಿಱಿದನು ॥

ಬೊಬ್ಬಿಡುವ ಕರ್ಣಜನ ದನಿಗೇಳ್ದು ರೋಷದಿಂ !
ದಬ್ಬರಿಸಿ ಗಗನದೊಳ್ ತನ್ನ ರಥಮಂ ಬಿಟ್ಟು ।
ಹೆಬ್ಬಟ್ಟದಂತಿವನ ಮಸ್ತಕದ ಮೇಲೆ ಬೀಳಲ್ಕವಂ ಕನಲ್ದು ಕೂಡೆ ॥
ಉಬ್ಬಿ ಘುಟನೆಗೆದೆದ್ದು ಸಾಯಕದೊಳಚ್ಚವನ ।
ನೆಬ್ಬಿಸಿದನಾಗಸಕೆ ಮತ್ತೆ ಭೀಭತ್ಸುಕಂ ।
ಡೊಬೆ ರಳಸಲ್ಲಾಡಿ ಪೊಗಳ್ಕೆ ವೃಷಕೇತು ಫಲುಗುಣಂಗಿಂತೆಂದನು ॥

ತಾತ ನೋಡಿಂದು ರಣದೊಳ್ ಗಾಲಿ ಪಸು ।
ಧಾತಳದೊಳಚ್ಚೊಡ್ಡಾಯುತವಾಗಿ ನಿಲ್ವಿನಂ ।
ಘಾತಿಸಿದರೆಂದು ಸಿನ್ನೊಪನೆ ನಮ್ಮಯ್ಯನಾಡಿದವೊಲಾಡದೆ ಸುಮ್ಮನೆ ॥
ಈತನೆನ್ನಸ್ತ್ರದಿಂ ಗಾಸಿಯಾದಪನೆಂದು ।
ಮಾತಾಡುವನಿತಱೊಳ್ ಮತ್ತಿವನ ಮೇಲೆ ಬಂ ।
ದಾತಬೀಱಲ್ ನೊಂದರಿರ್ವರುಂ ಚೇತರಿಸಿಕೊಂಡು ಘುರಕನುವಾದರು ॥

ಮಣಿವರೂಥಾರೂಢರಾಗಿ ಬಱಿಕಿರ್ವರುಂ ।
ರಣರಂಗದೊಳ್ ಕಡುಗಿ ಕಾದಿದರ್ ಕಾಯದೊಳ್ ।
ಕಣೆಗಳಡಿಯಲ್ಕಣ್ಣವಂ ಕಚ್ಚಿ ಪಾಱಲರುಣಾಂಬುಗಳ್ಕೋಡಿವರಿಯೆ ॥
ಪೊಣರ್ವರಂಬರಕಡರ್ದೊರ್ವಮ್ಮೆ ಮೇದಿನಿಗಿೞಿದು ।
ಪೆಣಗುವರ್ ಮತ್ತೊಮ್ಮೆ ನಭದೊಳಿರ್ದೊರ್ವರ್ವಂ ಧ ।
ರಣಿತಳದೊಳಗೊರ್ವ ನಾಗಸದೊಳೊರ್ವನಿರೆ ಸರಿಸಮದೊಳಾಕಲಿಗಳು ॥

ಭೂಪ ಕೇಳಿಂತೈದುದಿನಮೈದೆ ಕಾದಿದರ್ ।
ಚಾಪವಿದ್ಯಾಪ್ರವೀಣರ್ ಬಱಿಕ ಪಾರ್ಥಜಂ ।
ಭಾಪುರೇ ವೃಷಕೇತು ನೀನೆ ಪಟುಭಟನಪ್ಪೆಲೋಕದೊಳ್ಸಾಕೆದೆಯೊಳು ॥
ಶ್ರೀಪತಿಯ ಧ್ಯಾನಮಂ ಮಾಡೆನುತ ತೆಗೆದೆಸಲ್ ।
ಕೋಪದಿಂದಾಕಣೆಯನಿವನರಿವನಿತಱೊಳ್ ಪ್ರ ।
ತಾಪದಿಂ ಕವಲಂಬನೆಚ್ಚು ಕತ್ತರಿಸಿದಂ ಕರ್ಣಜನ ಕಂಧರವನು

---

## ಹರಿಶ್ಚಂದ್ರ ಕಾವ್ಯ.

ಈ ಗ್ರಂಥವನ್ನು ರಚಿಸಿದ ಕವಿಯು ಹೆಸರು ರಾಘವಾಙ್ಕ. ಈತನು ಲಿಂಗವಂತ ಮತದವನು. ಈತನು ತುಂಗಭದ್ರಾ ನದೀತೀರದಲ್ಲಿರುವ ಕುಂತಳದೇಶದ ಹಂಪಾ (ಹಂಪೆ) ಪುರದಲ್ಲಿ ಜನಿಸಿದನು. ಇವನು ವಿಷ್ಣು ಭಕ್ತ ಚರಿತ್ರವಾದ ಹರಿಶ್ಚಂದ್ರ ಕಾವ್ಯವನ್ನು ಬರೆದನು. ಇದರಿಂದ ವೀರಶೈವಮತಾಭಿಮಾನಿಯಾದ ಹರೀಶ್ವರ ಕವಿಯೆಂಬ ಇವನ ಸೋದರಮಾವನಿಗೆ ವಿಶೇಷವಾದ ಕೋಪ ಬಂದಿತು. ಆದಕಾರಣ ತನ್ನ ಗುರುವೂ ಮಾವನೂ ಆದ ಹರೀಶ್ವರನ ಮಾತಿನಂತೆ ಮುಂದಕ್ಕೆ ರಾಘವಾಙ್ಕನು ಸೋಮನಾಥಸತ್ಕಾವ್ಯವೇ ಮೊದಲಾದ ಶೈವ ಗ್ರಂಥಗಳನ್ನು ಬರೆಯಲುಪಕ್ರಮಿಸಿದನು. ಬಳಿಕ ಓರುಗಲ್ಲಿಗೆ ಹೋಗಿ ಅಲ್ಲಿಯ ದೊರೆಯ ಆಸ್ಥಾನದಲ್ಲಿದ್ದ ಏಕಸಂತದ್ವಿಸಂತಗ್ರಾಹಿಗಳೆಂಬ ಪಂಡಿತರೊಡನೆ ವಾದಿಸಿದನು. ವೀರೇಶ್ವರಕಥೆ ಎಂಬ ಶೈವ ಗ್ರಂಥವನ್ನು ಬರೆದು ಸನ್ಮಾನ ಹೊಂದಿದನು. ಕೊನೆಗೆ ಈತನು ಹಾಸನ ಡಿಸ್ಟ್ರಿಕ್ಟಿನಲ್ಲಿರುವ ಬೇಲೂರಿನಲ್ಲಿ ತನ್ನ ಕಡೆಗಾಲವನ್ನು ಕಳೆದು ಕೈಲಾಸವನ್ನು ಸೇರಿದನು. ಈತನು ಸಿದ್ಧರಾಮಪುರಾಣ, ಸೋಮನಾಥಚರಿತೆ, ವೀರೇಶ್ವರಚರಿತೆ, ಶರಭಚಾರಿತ್ರ, ಹರಿಹರಮಹತ್ತ್ವ ಎಂಬ ಶೈವ ಗ್ರಂಥಗಳನ್ನೂ ಬರೆದಿದ್ದಾನೆ.

ವಾರ್ಧಕಷಟ್ಪದಿ.

### ೨೧. ಹರಿಶ್ಚಂದ್ರನು ರಾಜ್ಯವನ್ನು ವಿಶ್ವಾಮಿತ್ರನಿಗೆ ಒಪ್ಪಿಸುವುದು.

(ಹನ್ನೊಂದನೆಯ ಸ್ಥಲ)

ಸೂ|| ಮುಳಿದಸಿತು ರಾಜ್ಯಮಂ ಕೌಶಿಕಂಗಿತ್ತು ತ |
ನ್ನೊಡನೆ ರಥಕಾರಸತಿಸುತಮಂತ್ರಿವೆರಸಿ ಜನ |
ದೊಡೆಯ ಕಾಶಿಗೆ ನಡೆವೆಡೆಯೊಳಾದವಸ್ಥೆಯನದಾವ ಜೀವರುಕೇಳ್ವರು||

ಉಡುಗಣದ ನಡುವಣಿಂದುವ ತೆಗೆಸಿ ರಾಹು ಬಂ |
ದೆಡೆಗೊಂಬ ತೆಱನಾದುದಾರಣ್ಯದೊಳು ಮೃಗದ |
ಗಡಣದಿಂದಿಪ್ಪ ಹರಿಯುಂ ತೆಗೆಸಿ ನರಿ ಸುಖಾವಾಸವನು ಕೈಕೊಂಬ
[ವೋಲ್ ||

ಕಡಲ ವಾರಿಯೊಳು ಬಿಂಬಿಸುವ ರವಿಯುಂ ಪಂಗಿ |
ಲ್ಪಡೆ ಮುಸುಗುವಂತೆ ವಿಶ್ವಾಮಿತ್ರಮುನಿವರಂ |
ಪೊಡವೀಶನಂ ಮುಸುಕಿಕೊಂಡು ಕೌಶಿಕರಥವನೇಱಿ ಬರಲಿಂತೊಪ್ಪಿತು||

ಧರೆ ಬಿರಿಯಲಳ್ಳಿಱಿವ ಸಂದ ನಿಸ್ಸಾಳದ ।
ಬ್ಭೈರವನಾಲಿಸಿ ಪುರದ ಕೇರಿಗಳನೊಪ್ಪೆ ಸಿಂ ।
ಗರಿಸಿ ಮನೆಮನೆಗಳೊಳು ಗುಡಿತೋರಣಂಗಳಂ ಸರಬಿಗಿದು ಸಂಭ್ರಮ [ದಲಿ ॥

ಅರರೆ ಕೋಟಾಕೋಟಿ ಕರಿತುರಗರಥತತಿಯು ।
ಪರಿಜನಂಬೆರಸಿ ಮತ್ತಂ ಹರಿಶ್ಚಂದ್ರ ಭೂ ।
ವರನನಿದಿರೊಳಲು ನಡೆದರು ಶಶಿಯನಿದಿರೊಳಲು ಹೆಚ್ಚುವಂಭೋಧಿ [ಯಂತೆ ॥೩೯೬॥

ಮುತ್ತಿದಣುಕುಗಳ ಮುಸುಕಿದ ಹಲವು ಝಲ್ಲರಿಗ ।
ಳೊತ್ತಿನೊಳು ತಳಿತ ಬೆಳುಗೊಡೆಗಳಿಡುಕುಱಿ ನೆೞಲ ।
ಕುತ್ತುಱೊಳು ಝಾಡಿಸುವ ಚಮರಸೀಗುರಿಗಳೊಗ್ಗಿನ ಕುಱುಹು [ ವಿಡಿದು ॥

ಎತ್ತಿದ ಮೊಗಂ ನಿಲುಕಿನೋಟ್ಟ ಕಂಗಳು ಮುಗಿದು ।
ಹೊತ್ತಕೈಯ್ಯವಧಾರು ಜೀಯ ಎಂದೆಂಬ ನುಡಿ ।
ವೆತ್ತು ಹತ್ತಿರೆ ಬಂದ ಮುನಿಯು ಮೊಗಮಂ ಕಂಡ ಹೊತ್ತನಿನ್ನೇವೊ [ಗೞ್ವೆನು ॥೩೯೭॥

ನಸುಗುನಿಯನಪ್ಪಿದಳಿಕುಳದಂತೆ ಕಡುಹಸಿದು ।
ಕಸುಗಾಯನಗಿದ ಗಿಳಿಗಳ ಬಳಗದಂತೆ ನಿ ।
ಟ್ಟಿಸದೆ ವಿಷಮಂ ಸವಿದ ಶಿಶುಪಿಸರದಂತೆ ಕೊರಡಂ ಕರ್ಚಿ ಚಂಚು [ನೊಂದು ॥

ಕುಸಿದ ಶುಕಪಿಕನಿಕರದಂತಿಂತು ಬೇಸತ್ತು ।
ಬಸವಱಿಯುತಂದು ಮಂಟಪಗಳೊಳಱಿಸಿದರು ಪಾ ।
ಮಸಕದಿಂ ಪುರಜನಂ ಭೂಪನಂ ಹೊಲಗೆಟ್ಟಕಱುತಾಯನಱಸುವಂತೆ ॥

ಹಗಲೊಗೆದ ಚಂದ್ರಕಳೆಯಂತೆ ಖರಸ್ಪೈಶಿಖ ।
ದೊಗೆದ ಬನದಂತೆ ಬಿಸಿಲೊಳು ಬಿಸುಟ ತಳಿರಂತೆ ।
ಮೊಗ ಕಂದಿ ಮುಸುಕಿಲ್ಲದರುವೆಗಪ್ಪಟವುಟ್ಟು ರಾಗಱಿದೊಪ್ಪುಗೆಟ್ಟು ॥
ಮಗನರಸಿಮಂತ್ರಿಸಹಿತವನಿಪಂ ಹಿಂದೆ ದೇ ।
ಸಿಗನಂತೆ ಕೌಶಿಕನ ಕಾಹಿನೊಳು ಬರೆ ಹಿಂಪೆ ।
ಬಗೆಗದಱಿ ಹೊದ್ದಿ ಹೊಡೆವಟ್ಟು ಕಾಣಿಕೆಯ ಚಿತ್ತೈಸು ಭೂಭುಜ [ಯೆಂದರು ॥೩೯೯॥

ಎನಗರಸುತನವಿಂದು ಹೋಗಿ ವಿಶ್ವಾಮಿತ್ರ ।
ಮುನಿಗಾದುದಾತನಂ ಕಂಡು ಕಾಣಿಕೆಯನಿ ।
ತ್ತನುದಿನಂ ಬೆಸಕೈವುದೆನಲೊಲ್ಲೆವೆನಲು ಬೋಧಿಸಿ ಬಲಾತ್ಕಾರದಿಂದ॥
ಜನವ ಕಾಣಿಸಿ ಕಾಣಿಕೆಯ ಕೊಡಿಸಿ ಹಿಂದುಗೊಂ ।
ಡಿನಕುಲಲಲಾಮನೈತಂದು ಪುರಮಂ ಪೊಕ್ಕು ।
ಮನದೊಳುತ್ಸವದ ಹೆಚ್ಚುಗೆಯಳಿದು ನಿಂದಮಂದಿಯ ನೋಡುತಂ ನಡೆ
[ದನು ॥೪೦೦॥

ಗೊಂದಣಂ ಮಿಗೆ ಹರಸಲೆಂದಾರತಿಯನೆತ್ತ ।
ಲೆಂದು ಸೇಸೆಯನಿಕ್ಕಲೆಂದಾರ್ತದಿಂ ನೋಡ ।
ಲೆಂದು ರೂಪಂ ಮೆಱೆಯಲೆಂದು ಸೊಬಗಂ ಸಾರಲೆಂದು ನವರತ್ನವಿಡಿದ॥
ಹೊಂದೊಡಿಗೆಯಂ ತೋರಲೆಂದು ಜನದಳವಱಿಯ ।
ಲೆಂದು ಬೀದಿಯೊಳು ಬಾಗಿಲೊಳು ಭದ್ರಂಗಳೊಳು ।
ನಿಂದು ಸತಿಯರು ಭೂಪನಿರವ ಕಂಡುರಿಹೊಯ್ದ ಹೊಗಣೆಗಳಂತಿ
ರ್ದರು ॥೪೦೧॥

ನೂಕಿ ನಡೆದರಮನೆಯ ಹೊಕ್ಕು ಸಿಂಹಾಸನ ।
ಕ್ಕಾ ಕೌಶಿಕಂ ಬಂದು ಭೂಭುಜನ ಕಯ್ಯ ಹಿಡಿ ।
ದೇಕಕಟ ಕಲಿಕೊಟ್ಟೆಯೀ ಕರಿಗಳೀ ಕುದುರೆಯೀ ರಥಗಳೀ ಕುಲಜನ॥
ಈ ಕೋಶವೀ ನಗರಿಯೀ ಕಾಂತೆಯೀ ಕುವರ ।
ನೀ ಕಾಮಿನೀಜನಂ ಮಱುಗದಂತರಸಾಗ ।
ಬೇಕಾದಡೆನ್ನ ಮಕ್ಕಳ ಮದುವೆಯಹುದು ಲೇಸೆನಲವನಿಪತಿನುಡಿದನು ॥

ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ ಮೊಗ ।
ಸಿತ್ತು ಕನ್ನಡಿಯ ನೋಡುವರೆ ಮಾಣಿಕದೊಡವ ।
ನೊತ್ತೆಯಿಟ್ಟೊಡೆದ ಗಾಜಂ ಹಿಡಿವರೇ ಕೋಪದಿಂ ಸತ್ತು ಮದುವೆಯ
[ಹರೇ
ಕತ್ತುರಿಯನುರುಹಿ ಕುಱುಗುರುಳಸಿಕ್ಕುವರೆ ನೆಱೆ ।
ಚಿತ್ತೈಸು ಹೊಲತಿಯರ ಪಿಡಿದು ನಾನೋವೆನೆ ।
ಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹೆನೇ ಮುನಿನಾಥ ಕೇಳೆಂದನು॥

ಬಲ್ಲದಿರಬೇಡೆಲೇ ಸೊಲ್ಲನೊಲ್ಲೆಂ ಪೊಲ್ಲ |
ನಿಲ್ಲಿಂದಮೇಲಿನ್ನು ಮೊದಲಾದ ತಪ್ಪುತ್ತಾ |
ನಿಲ್ಲೆಂದೊಡಿಲ್ಲಾದೊಡಿನ್ನು ನಿನಗುಳ್ಳ ಪರಿವಾರಮಂ ಚತುರಂಗನ ||
ಸಲ್ಲಲಿತದೇಶಕೋಶವನಂಕಟಂಕನನು |
ಬಲ್ಲ ಕುಲಕರಣ ವರ್ಗಂ ಮುದ್ರೆ ಮೊದಲಾದ |
ವೆಲ್ಲಮಂ ಬೇಱೊಪ್ಪುಗೊಟ್ಟು ಹೋಗೇಳೆನಲು ತರಹೇಳಿದಂ ಮಂತ್ರಿಗೆ ||

ಪೊಡವಿಪಂ ಪೇಳೆ ಮಂತ್ರೀಶನತಿವೇಗದಿಂ |
ಹಡಪಾಳರಂ ಕರೆದು ಕರೆ ಸಕಳಪರಿವೆರವ |
ತಡವ ಮಾಡದೆ ತರಿಸು ಕರಿತುರಗರಥಸೀಗುರಿಗುಡಿಮೊದಲಾಗೆಲ್ಲವ ||
ಬಿಡದೆ ಮುನಿವರಗೊಪ್ಪುಗೊಡಬೇಹುದೋಲಗದ |
ಪಡದಿಯರ ಭಂಡಾರಿಗಳನು ಮನ್ನಣೆಯವರ |
ನಡೆವಿಡದೆ ಬರಿಸೆನಲು ಭೂವರನ ಸಮ್ಮುಖದೊಳಿರಿಸಿದರದೇವ್ರೊಗ
[ಟ್ವೆನು ||೪೦೫||

ಬಾಡಿದ ಮೊಗಂ ಬಱುತಬಾಯ್ ಸುರಿವ ನಯನಾಂಬು |
ಪಾಡೞಿದ ಮತಿ ನೀಡೆ ಬೆಳೆದ ಸುಯ್ ನುಗುಡವೆ |
ಬ್ಯಾಕುಲಂಗಂ ನಿರೋಧಾಗ್ನಿಯಿಂ ಕುಂದು ಮಱುಗುವ ಮನಂಮಾಸಿದ
[ಮೊಗಂ |
ಕೂಡೆಬಂದಖಿಳಪರಿವಾರಮಂ ಸತಿಯುಮಂ |
ನಾಡೆ ಚತುರಂಗಬಲಮಂ ಪುರಜನಂಗಳಂ |
ನೋಡಿ ತೋಱಿಸಿ ಬೇಱೆಬೇಱೊಪ್ಪುಗೊಡುತಿರ್ದನಾ ಧೈರ್ಯಸಿಧಿ
[ಭೂಪನು ||೪೦೬||

ಸಿರಿಮುಡಿಯು ಹಡಪದಾರತಿಯು ಸೀಗುರಿಯು ಚಾ |
ಮರದ ಮರ್ದನದ ಪಂತಿಗಳ ಪಡಿಸಣದ ಸಿಂ |
ಗರದ ಗಂಧದ ಯಕ್ಷಕರ್ದಮದ ಕನ್ನಡಿಯ ಹಿಡಿವಜನಸಮುಕಟ್ಟಿನ ||
ಸರಸದ ವಿಳಾಸದ ವಿನೋದದ ವಿಚಾರದಾ |
ಭರಣದೊಡ್ಡಿನ ಬಹುನಿಯೋಗಕಾರಿಯರೆಸೆವ |
ತರುಣಿಯರನೊಪ್ಪಿಸಿದನಂದು ವಿಶ್ವಾಮಿತ್ರಮುನಿಗೆ ಸತ್ಯರ ದೇವ ಸ

ಇದು ರತ್ನಭಂಡಾರವಿದು ಹೇಮಭಂಡಾರ ।
ಇದು ಪಟ್ಟಕರ್ಮವಿದುವಿದು ಜಳ್ಳಿಯುಗ್ರಾಣ ।
ಇದು ಕಂಚಿನುಗ್ರಾಣವಿದು ಸುನಾಣೆಯುಪರ್ಗವಿದು ಸರ್ವಶಸ್ತ್ರಸದನ॥
ಇದು ಹಸ್ತಿಸಂದೋಹವಿದು ತುರಗಸಂಘಾತ ।
ಇದು ವರೂಥಪ್ರಕರವಿದು ಪದಾತಿವ್ರಾತ ।
ಇದೆ ನೋಡಿಕೊಳ್ಳೆನುತೆ ಒಪ್ಪಿಸಿದನಾಮುನಿಗೆ ಭೂನಾಥಕಂದರ್ಪನು ॥

ಹಿರಿಯುಬಿರುದಿನ ಮುದ್ರೆಯಿದು ನಗರವಿದು ಪೂರ್ವ ।
ದರಮನೆಯಿದಖಿಳಪರಿವಾರವಿದು ಸಿಪ್ರತಿಯಿದು ।
ಕರಣವಿದು ಮೇಲುಳ್ಳ ಸರ್ವಸ್ವವಿದೆನೋಳ್ಪಕೊಳ್ಳಿ ಮಹಾಪುರುಷಯೆಂದು॥
ವರಕೌಶಿಕಂಗೊಪ್ಪಗೊಟ್ಟೆಲ್ಲ ಸಂಪದಂ ।
ಪರಿಣಾಮವೇ ಇನ್ನು ಹೋಹೆನೇ ಮುನಿನಾಥ ।
ಕರುಣಿಸಿದಿರೇ ಎಂದು ಹೊಡವಟ್ಟು ಹೋಹಂಸನೊಡನೆದ್ದನಾ
ಮೊಶಿರ್ಗನು ॥೪೦೯॥

ಪೊಡವಡುವ ಭೂನಾಥನಂ ಕಂಡು ಕಂಗೆಟ್ಟು ।
ಮುಡುಗಿ ಬಸಿಱಂ ಹೊಸೆದು ಬಸವಳಿದು ಬಿಸುಸುಯ್ಯು ।
ಮೊಱೆಯಿಟ್ಟು ಕಟ್ಟಾಗಲಿ ಕೈಸೋತಿ ಕರೆಕರೆದು ಕಂಡು ಸೈರಿಸಲಾರದೆ॥
ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರವಂ ।
ಮುಱಿದೆಯೋ ತೊಱೆದೆಯೋ ಮಾಱಿದೆಯೋ ಹೇಳು ನೀ ।
ಸುಡುಗರಾಜಯೆಂದೆಂದು ಬಿಱುನುಡಿದು ಮಿಡಮಿಡನೆ ಮಿಡುಕಿತ್ತು ಪೌರ
[ಜನವು ॥೪೧೦॥

ದಂತಿಯಿಂದಿಳಿದು ನಡೆನುಡಿಯ ಬಾಲಿಕಾಲ್ಗಳಿಂ ।
ದೆಂತಡಿಯುಸಿಡವೆ ಹಾಸಿನೊಳು ನಡೆದಿಸುವಾತ । [ಪ್ರಾಪ್ತನು ॥
ನೆಂತು ಕಲು ನೆಲದೊಳಗುವ ಬೆಳ್ಳುಗೆಡೆಯು ತಡಿಸೊಳಗಗಲದಿ
ಎಂತು ಬಿಸಿಬಿಸಿಲನಾಸುವ ಪ್ರದೋಷಪ್ರಾಪ್ತ ।
ನೆಂತರಣ್ಯದೊಳಿಪ್ಪ ಜನಪನಗಲ್ದುಱಿಯಲಾದಪ ।
ನೆಂತು ಹೇಳೆಲೆಕಾಶಿಯಾಗಿಪ್ಪೆಯೆಂದು ಮೊಱೆಯಿಟ್ಟುದು ಸಮಸ್ತ
[ಜನವು ॥೪೧೧॥

ಮಸಗಿ ಪುರದಿಂ ವಿಾಱಿ ಪೋಗುತಿರೆ ಕಂಡು ಸಂ ।
ದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ । [ವೆನು ॥೪೧೬॥
ನೊಸೆದು ನಿಲಿಸುವ ಭರದೊಳೊಂದೆರಡು ಮಾತನಾಡಿನಸದೇವೆಣಿ ಸು

ಹಿಂದೆ ರಾಜ್ಯಂಗೆಯ್ದು ಗರ್ವದಿಂ ಹೊಲತಿಯುರ ।
ತಂದು ಕುಲಮಂ ಕೆಡಿಸಲಾರದಱಲಿಂ ನಿಮ್ಮ । [ನುಡಿದ ॥
ದೊಂದು ನುಡಿಯುಂ ತಪ್ಪಿ ನೆಱಿಜಱಿದು ಮಾಱುತ್ತರಂಗೊಟ್ಟು ಕೆಟ್ಟು
ನಿಂದೆಗೆಯ್ದನ್ಯಾಯಿ ಪಾಪಿ ಚಂಡಾಲನೆ ।
ನ್ನಿಂದಧಮರಿಲ್ಲಯ್ಯ ಸರ್ವಾಪರಾಧಿಯಾಂ ।
ತಂದೆಕರುಣಂಗೆಡದಿರೆಂದು ಮುನಿಸುಂ ಬೇಡಿಕೊಂಡನು ಹರಿಶ್ಚಂದ್ರನು॥

ಮನದೊಳಗೆ ಮುಱುಗದಿರಿ ಚಿಂತಿಸದಿರಱಲದಿರಿ ।
ಮುನಿಯದಿರಿ ನೋಯದಿರಿ ಮತಿಗೆಡದಿರೆರಡನೆಯ ।
ಶಿವನೆನಿಪ ಕೌಶಿಕಂ ನಿಮ್ಮೊಡೆಯನಾದನಾತನ ಪಾದಪಂಕೇಜಕೆ ॥
ಎನಗೆ ಬೆಸಕ್ಕೆಂತೆ ಬೆಸಕ್ಕೈವುದಂಜುವುದು ।
ವಿನಯದಿಂ ನುಡಿವುದೋಲೈಸುತಿಪುದೆಂದು ಪರಿ ।
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯದಿಂದಾಹರಿಶ್ಚಂದ್ರನು ॥

ಧರೆಗಧಿಪನೆನಿಪ ರವಿಕುಲದ ಇಕ್ಷ್ವಾಕು ಭೂ ।
ವರನ ಮೊದಲನ್ವಯಾಗತವಾಗಿ ಬಂದುದೀ ।
ಪರಿವಾರವೀದೇಶವೀಕೋಶವಿಂದು ತನಕಾವೆಱಿದು ಬಡತನವೆನು ॥
ನೆರೆಯಱಿಯದಯ್ಯ ನೀವಿನ್ನಿದಂ ರಕ್ಷಿಪುದು ॥
ಹೊರೆವುದನಿತಂ ಬೇಡಿ ಪಡೆದೆ ನಾಂ ನಿಮ್ಮಲ್ಲಿ ।
ಕರುಣಿಸಿದನೆಂದು ಕೈಮುಗಿದು ಮುನಿಗಪ್ಪೈಸಿ ಕೊಟ್ಟನು ಹರಿಶ್ಚಂ
[ದ್ರನು ॥೪೧೯॥

---

## ಚೆನ್ನಬಸವಪುರಾಣ.

ಈ ಷಟ್ಪದಿ ಕಾವ್ಯವನ್ನು ಬರೆದ ಕವಿಯ ಹೆಸರು ವಿರೂಪಾಕ್ಷ ಪಂಡಿತ. ಈತನು ಕ್ರಿಸ್ತಾಬ್ದ ೧೫೮೪ರಲ್ಲಿ ಈ ಪುರಾಣವನ್ನು ಮುಗಿಸಿದನು. ಈತನ ಗುರು ವಿದ್ಯಾನಗರ (ವಿಜಯನಗರ)ದಲ್ಲಿ ಸ್ಥಾಪಿತವಾಗಿದ್ದ ಹಿರಿಯ ಮಠದ ಸಿದ್ಧವೀರೇಶ್ವರಸ್ವಾಮಿ.

ಈ ಗ್ರಂಥದಿಂದ ವಸಂತವರ್ಣನೆ, ಬಿಜ್ಜಳನ ಸಭೆ, ವನವರ್ಣನೆ, ಇವನ್ನು ವರ್ಣಿಸುವ ಪದ್ಯಗಳು ಮಾದರಿಗಾಗಿ ಉದ್ಧರಿಸಲ್ಪಟ್ಟಿವೆ.

---

### ವಾರ್ಧಕ ಷಟ್ಪದಿ.

### ೩೧. ವಸಂತಋತುವರ್ಣನೆ.

ಚಳಿಯೊತ್ತು ಜಾಱೆ ತಂಗಾಳಿ ತಲೆದೋಱೆ ಪೂ |
ಗಳ ಕಂಪು ಪಾಱೆ ಭೃಂಗಂ ನಲಿದು ಪಾಡೆ ಕೋ |
ಕಿಲೆಯ ದನಿ ಸಾಱೆ ಮದನಂಗೆ ಬಲಮೇಱೆ ನದಿಗಳ್ತಾಱೆ ಮಾಮರಗಳು
ತಳಿರುಗಳ ತೋಱೆ ವಿರಹಿಗಳ ಬಾಯಾಱೆ ಸುಖಿ |
ಗಳ ತಾಪಮಾಱೆ ಮುನಿಗಳ ಮನಂ ಮೀಱೆ ಭೂ |
ವಳಯಕೆ ವಸಂತಾಗಮಂ ಮನೋರಾಗಮಂ ಮಾಡುತ್ತೈತರುತಿರ್ದುದು ||

ಮೌನವ್ರತಾಚಾರಿಯಾದ ಕೋಕಿಲೆಯಂದು |
ಮೌನಮಂ ಬಿಟ್ಟುಲಿಯುತೊಡಗಿದುದು ಮಲ್ಲಿಕಾ |
ಮೋಸಿನಿಗೆ ಚಂಡಾಳಿಗಳ ಸಂಗವಾದುದಿನನರಸಿ ಸಿರಿವನೆಯೆನಿಸುವ ||
ಆನಳಸಿ ಬಂಡಿಗೊಳಗಾದಳುತ್ಪಲಜಾತಿ |
ಹೀನವಾಯ್ತಿಳೆಯೊಳಿಮ ಮೇಘಸಂಗದಿಂದಲೇ |
ನೇನಾಗವಿಂದೆಂದು ತೋರ್ಪಂತೆ ಬಂದುದು ವಸಂತಮದವನೇನೆಂಬೆನು ||

ಎಳವಳ್ಳಿ ಕೆಂಪು ಪೂಗಳ ಕಂಪು ಕೋಕಿಲಂ |
ಗಳ ಸರದ ನುಣ್ಪು ತೆಂಗಾಳಿಯ ಸವಂಪು ಗಿಳಿ |
ಗಳ ರವದ ಸೊಂಪು ತುಂಬಿಯ ಗಾನದಿಂಪು ನಾನಾಫಲಾವಳಿಯ ಬಿಣ್ಪು ||

ತಿಳಿಗೊಳದ ತಂಪು ವಿರಹಿಯ ಕ್ಕೈಕದಂಪು ಸುಖಿ |
ಗಳ ಮನದ ಪೆಂಪು ಜನಗಳ ಗುಂಪು ಗುಂಪುಸಂ |
ಗಳಿಸಿತೆಲ್ಲಿಲ್ಲಿಯುಂ ಚೈತ್ರಾಗಮಂ ಬರಲ್ ಪೇೞ್ವುದೇನಚ್ಚರಿಯನು ||

ಎಳದಳಿರಮಾಣಿಕದ ಗೊಂಚಲ್ಗಳಿಂದೆ ಪೂ |
ಗಳ ಮಿಸುನಿಗುಸುರಿಗಳ ಕುಚ್ಚುಗಳಿನೆಸೆವ ಮಿತಿ |
ಗಳ ಪಚ್ಚೆವರಲ ಸೂಸಕಗಳಿಂ ಪ್ರಿಯಳಾಪಳ್ಳಿಗಳ ಬಿಗಿಮುಗುಳ್ಗಳ ||
ತೊಳಪ ಮುತ್ತಿನ ಗುದಿಗಳಿಂ ಚಲಿಪ ಮಱಿದುಂಬಿ |
ಗಳ ನೀಲಮಣಿಮಾಲೆಯಿಂದೆಸೆವ ಮಾಮರಂ |
ಗಳು ವಸಂತಂ ಸ್ಮರನ ಬರವಿಂಗೆ ಕೈಗೈದ ಗುಡಾರವೆನಲೆಸೆದುವು ||

ತೀರ್ಕೈಸಿ ಬರ್ಪ ತುಂಬಿಗಳ ವ್ಯಗ್ರಪ್ರಮುಂ |
ಗಾರ ಮುಗಿವವು ಝುಂಕಾರವೇ ಪೊಱಗು ವರ | [ಯುರಲ್ಗಳೇ ||
ನಾರಿಯರ ತೊಳಪ ಕಣ್ ಮಿಂಚು ಮಾರುತಪತಿಯೊಳೊಗುವ ಮಲ್ಲಿಗೆ
ತೋರ ಮಱೆಪನಿಗಳೊಂದೊಂದುಮಪ್ಪ ಬಂದುಗೆಯು |
ಪೂ ರಮ್ಯವಾದಿಂದ್ರಗೋಪಂಗಳಾಗೆ ಕ್ಷ್ಯಂ | [ದೊಳು ||೩-೮||
ಗಾರವಾಯ್ತುದು ವರ್ಷವೋ ವಸಂತವೊ ತಿಳಿಯಲರಿದೆನಲು ಬನಬನ

---

## ೩೨. ಬಿಜ್ಜಳನ ಸಭೆ.

ಉದಯಾಚಲದ ಮೇಲೆ ಕಂಗೊಳಿಪ ರವಿಯಂತೆ |
ಪವಳಿನಿಂ ಕನಕಸಿಂಹಾಸನದ ಮೇಲೆ ಭೂ |
ಸುದತಿಯಧಿನಾಯಕಂ ಬಿಜ್ಜಳಂ ರತ್ನಭೂಷಣಕಾಂತಿ ರುಚಿಗಳಂತೆ ||

ಪೊಳೆವ ಮಕುಟದ ರತ್ನಕಾಂತಿಗಳ್ ದಿಗ್ಭಿತ್ತಿ |
ಗಳೊಳಮರೆ ನಾನಾವಿಚಿತ್ರಚಿತ್ರದ ತೆಱದ | [ಪ್ರಕಟಿಸೆ ||
ತೊಳಗೆ ಭೂಷಣವಿರಚಿತನವೀಕ್ಷಕರ ರುಚಿ ಪಗಲೊಳು ಜೊನ್ನಮಂ
ಥಳಥಳಿಸುವಂಗಲತೆಯೊಳು ಪ್ರಭೆಯ ಸಾಕಲಿಪರಿ |
ಮಳಕೆವಿಗುವೆಳಿಸಾಲೆ ಮೇಲೆ ಮಂಡಳಿಸ ಸಿರಿ |
ಕೆಲಬಲದ ಗದ್ದುಗೆಗಳೊಳು ಮಂಡಲಾಧೀಶರೊಪ್ಪಿರ್ದರಾಭೂಪನ ||

ಮುರಿದ ಮೀಸೆಗಳ ಕೆಂಗಣ್ಣುಗಳ ಪಣೆಯ ಕ ।
ತ್ತುರಿಯ ತಿಲಕದ ಮೈಯೊಳೊರೆದ ಗಂಧದ ಕಾಲ । [ಕೆಗಳ ॥
ಬಿರುದುತೊಡರಿನ ವಾಮಕರದ ಪೊಂಜರಪಣೆಯ ಬೆರಳ ಮಣಿಮುದ್ರಿ
ಕೊರಳ ಹಾರದ ಕರ್ಣಭೂಷಣದ ಝಳಪಿಸುವ ।
ಕರವಾಳ ಹೊಳಹುಗಳ ಬಳೆದ ಮುಡುಹುಗಳ ಸಂ ।
ಗರಧೀರರಾಜಸುಕುಮಾರರೊಪ್ಪಿರ್ದರವನೀಪಾಲನಿಕ್ಕೆಲದೊಳು ॥೪೬॥

ಕರೆದು ದಿನವಹಿವರ್ಗಮಾಸಾಂತಿಕಾದಿಗಳ ।
ಬರೆದೋದಿ ಸರಿದೋಱು ಭೇದಕರ್ ಬಹುವಿಧದೆ ।
ಪರಿಕಿಸಲೊಳಗುಗಾಣದಂತೆ ಛಿದ್ರಿಸಿ ತೆಗೆವ ಜಾಣ್ಮೆ ಕಡುನೈಜವಾಗೆ ॥
ಪರಮಲಂಚವೆ ತಮಗೆ ಜೀವನವದೆನಿಸೆ ಚ ।
ಚ್ಚರದಿಂದಲೈಶ್ವರ್ಯಮಂ ಪಡೆದು ನೆಱೆ ಬಾಳ್ವ ।
ಕರಣಿಕಶಿರೋಮಣಿಗಳೊಪ್ಪಿರ್ದರಾಬಿಜ್ಜಳಾವನಿಪನೋಲಗದೊಳು ॥

ಶ್ರುತಿಶಬ ತರ್ಕವೇದಾಂತಾರ್ಥಕೋವಿದರ್ ।
ನುತಪುರಾಣಾಗಮವಿಚಾರನಿಪುಣರ್ ಸಮು ।
ನ್ನತಕನಕಪೀಠದೊಳ್ ಬಱದ ಗಡ್ಡದ ರತ್ನಕುಂಡಲಯುಗಂಗಳೆಸೆವ ॥
ಶ್ರುತಿಪುರಾಣಾಂಗಮೊದಲಹ ವಿದ್ಯೆಗಳ ಸಮಾ ।
ಶ್ರಿತಯಜ್ಞಸೂತ್ರಕಾಶೀಮುದ್ರಿಕೆಗಳ ಪಂ ।
ಡಿತನಿಕರವೊಪ್ಪಿರ್ದುದವನಿಪಾಲಕನ ಬಲಗಡೆಯೊಳು ವಿಲಾಸದಿಂದ ॥

ವರದೇಶಕಾಲಶಾರೀರಸೂತ್ರಂಗಳಂ ।
ಪರಿವಿಡಿಯೊಳಷ್ಟಮಸ್ಥಾನಭೇದಂಗಳಂ ।
ಪರಿಕಿಸುತ ಸಕಲರೋಗಂಗಳ ನಿದಾನಂಗಳಱಿದಾ ಚಿಕಿತ್ಸೆಗಳನು ॥
ಹರುಷದಿಂ ಮಾಳ್ಪ ಸದ್ಧರ್ಮದಯೆದಾಕ್ಷಿಣ್ಯ ।
ಪರಮಶಿವಭಕ್ತಿನಿರ್ಮತ್ಸರಂಗಳೊಳೆಸೆವ ।
ಉರುತರಸುವೈದ್ಯರೊಪ್ಪಿರ್ದರಾಬಿಜ್ಜಳಮಹೀಪಾಲನೋಲಗದೊಳು ॥

ನುಡಿದು ಪೊಗಳಿಸಿಕೊಂಬ ಪದಬಂಧರೀತಿಯಿಂ ।
ಬಿಡದೆ ಬಲ್ಲವರ ತಲೆದೊನೆಸುವ ಸಮಸ್ಯೆಯಂ । [ಗಳನು ॥
**ಕೊಡಲೊಡನೆ ಪೂರಿಸುವ ಘಟಿಕಾಶತವನುಸುರುತಾಕ್ಷಣಂ ಮೆಚು**

ಪಡೆವ ನವರಸರಸಿಕರೆನಿಪ ಕರ್ಣಾಟಕದ ।
ಬೆಡಗುಗಳ ಬಲ್ಲ ಸತ್ಕವಿಗಳೊಪ್ಪಿರ್ದರಾ ।
ಪೊಡವಿಪಾಲಕಬಿಜ್ಜಳನ ಬಲದ ಕಡೆಯ ಮಣಿಮಯದ ಗದ್ದುಗೆಗಳಲ್ಲಿ ॥

ಬಿರುದ ರಾಯರ ಗಂಡ ಜೀತಿಸರವರ್ಗಿರ್ದವೆ ।
ಗುರುಪಾನರಾಧೇಯ ಶರಸಿಧಿಸವ್ಯಾನಕ್ಷಾ । [ಶಾಂಕ ॥
ಸುರಮಹಾಗಾಂಭೀರ್ಯ ತರುಣೀಸಿಕಾಮುಲೋಚನಕುಮುದಕುಲಶ
ಶರಣಾಗತಾನಂದಚಕೋತವನಚೈತ್ರ ಭೂ ।
ವರಶಿಖಾಮಣಿ ಜೀಯ ಜೊನ್ನ್ಮಯ ಸಿಸಗೆಂದು । ॥೪೨೧॥
ಕರವೆತ್ತಿ ಪೊಗಟ್ವ ಪಾಠಕರ ಕೈವಾರ ಕಿವಿಗಿಂಪಮಾದ ನೃಪಸಭೆಯೊಳು

ಸಿರುತ್ತದಿಂ ಭಗದತ್ತನೆಣೆ ಸುರಸಿಂಹ್ಯಂ ಸಾಟಿ ।
ಕರಿಕಂಧರಾರೋಹಣಕ್ಕಾಮಪಕ್ಕಂದು । ಗದು ॥
ಬಿರುದುಕಡೆಯುವ ಕಾಲೊಳಿಟ್ಟು ಪೊಗಳಿಸಿಕೊಂಬ ಘುರಧೀರರಪಾವತಿ
ಪರಿಕಿಪೊಡೆ ತಮಗೆ ರೇವಂತನೇ ಸರಿ ಧನೇ ।
ಶ್ವರನೆ ಪಾಸಟಿ ಹಯಾರೋಹಣಕೆ ಸಂಗರಕೆ ।
ದೊರೆಯೆ ಮಿಕ್ಕವರೆಂಬ ವೀರರಾವುತರಿರ್ದರಾಸಿಂಹಾಸನೋಲಗದೊಳು ॥

---

ವಾರ್ಧಕಷಟ್ಪದಿ.

## ೩೩. ವನವರ್ಣನೆ.

ಎತ್ತ ನೋಡಿದೊಡೆ ಸಿಗಮೆಂಗಳಿಂ ಪೊಂಗಳಿಂ ।
ದೆತ್ತ ನೋಡಿದೊಡೆ ಗಾಮೆಂಗಳಿಂ ಪೆಂಗಳಿಂ । [ದಂ ॥
ದೆತ್ತನೋಡಿದೊಡೆ ನಗರಾಳಿಯಿಂ ಶಾಳಿಯಿಂ ದ್ರೋಣಾಮುಖಂಗಳಿಂ
ಎತ್ತಲುಂ ಪತ್ತನಸಮಾಜದಿಂ ಭೂಜದಿಂ ।
ದೆತ್ತಲುಂ ಖರ್ವಡನಿಕಾಯದಿಂ ಗೇಹದಿಂ ।
ದೆತ್ತಂ ಮಡಂಬದ ಸಘೋಷದಿಂ ಶೀಕದಿಂದ ನಾಡ ಸಿರಿ ಮುಚಿದುದು ॥

ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಪೈರುಗಳಿಂ ।
ದಲ್ಲಿಗಲ್ಲಿಗೆ ನೆಱೆವ ಕೆಱೆಗಳಿಂ ಕೊಳಗಳಿಂ ।
ದಲ್ಲಿಗಲ್ಲಿಗೆ ರನ್ನದಗಳಿಂ ತೊಱೆಗಳಿಂ ಹರಿವ ಕಾಲುವೆಗಳಿಂದಂ ॥
ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ ।
ದಲ್ಲಿಗಲ್ಲಿಗೆ ನೆಱೆವ ಶುಕಗಳಿಂ ಪಿಕಗಳಿಂ ।
ದಲ್ಲಿಗಲ್ಲಿಗೆ ಗವಾಕ್ಷವಗಳಿಂ ನವಗಳಿಂದಾದೇಶವೊಪ್ಪಿರ್ದುದು ॥೪೩೪॥

ಕಂಜಕುಮುದಂಗಳಿಲ್ಲದ ಸರಂ ಸರದಿಂದ ।
ರಂಜಿಸದ ಶುಕಪಿಕಂ ಶುಕಪಿಕಂಗಳಿಗೆ ಫಲ ।    [ಳಿಂ ॥
ಮಂಜರಿಯುನಿರದಿಹ ಮಾವು ಮಾವುಗಳನಪ್ಪದ ಬಳ್ಳಿ ಬಳ್ಳಿಗಳೊ
ಮಂಜುಳಧ್ವನಿಗೊಡದ ಪಱವೆ ಪಱವೆಗೆ ಸಂತ ।
ಸಂಜನಿಸದರಲರಲ ನವಪರಿಮಳಂಗಳಿಂ ।
ದಂ ಜತಿಯುದಿಳಿಗಾಳಿಯೊಳಗಾಳಿಯಿಲ್ಲದಿಹ ಬನವಿಲ್ಲನಾನಾಡೊಳು ॥

ಬಱಿಯುವರಸಂಗಳಿಂ ಚಂದ್ರಕಾಂತಂಗಳಿಂ ।
ಮುಱಿಯುವ ಧರಂಗಳಿಂ ಕಿಪಿಗಮೃತಸಾರಮುಂ ।    [ಯುನು ॥
ಕಱಿಯುವ ಸೊರಂಗಳಿಂ ದುರ್ನೀತಿದುರ್ಮಾರ್ಗದುಷ್ಕೀರ್ತಿಸಂತತಿ
ತೊಱೆಯುವ ಜನಂಗಳಿಂ ಸುರಪುರೋದ್ಯಾನಮುಂ ।
ಜಱಿಯುವ ಬನಂಗಳಿಂ ಜಾತಿವೈರಂಗಳಿಂ ।
ಮಱಿಯುವ ಮೃಗಂಗಳಿಂ ಕಾಣೆನಾದೇಶದೊಳಗೇನೆಂಬೆನಚ್ಚರಿಯನು ॥

ದೇವಮಾತೃಕನದೀಮಾತೃಕದೊಳಂ ಬೆಳೆವು ।
ದಾವ ಚೋದ್ಯಂ ಗಿಳಿ ಕವರ್ದಿಕಿಡೊಡೆ ಬಿದ್ದನಿಯು ।
ಮಾವಿಣ್ಣ ತನಿರಸವ ಕಾಲ್ಗಳಿಂ ಬೆಳೆವುನಾಗಾಳಿಯುಲಿದೋಸರಿಸುವ ॥
ತಿಂಪಿದ್ದೆಸಿರ ಕಬ್ಬಿನ ಸಾರದಿಂ ಬೆಳೆವು ।
ವಾಪಗಂ ಪಾಮರೀಮುಖಶರಶಿಗೆ ಸಹಿಗಂದು ।    [ವು ॥೪೩೭॥
ಗ್ರಾವನಿರ್ಮಳಜಲದ ಪೂರದಿಂ ಬೆಳೆಯುತಿಹ ಶಾಲಿಗಳ್ ಕಣ್ಗೆಸದು

ಶಾಲಿಗೆಱಗಿದ ಗಿಳಿಗಳಂ ಸೋವ ಪಾಮರೀ ।
ಜಾಲದೊಂದುಲಿಸ್ರುಮುಂ ಕೋಕಿಲನಿನಾದಮುಂ ।
ದೇಳಿವಂಗೈದು ತೋಱಗದೆ ನಿಂದ ಕೀರಾಳಿ ಕಂಗೊಳಿಸಿತೇನೆಂಬೆನು ॥

ಘೋಳಲನೆಗಾಕಳವೆ ಪ್ರಸವೋತ್ಸವಕ್ಕೆ ಸಂ।
ಮೇಳಿಸಿದ ಕೆಂಪುಗೂಡಿದ ಪಸುರುಪಟ್ಟೆಯ ವಿ।
ಶಾಲವಸನದ ಮುಸುಕಿದಂಬಿನಂ ಕಣ್ಗೆಸೆದುದೇನೆಂಬೆನಚ್ಚರಿಯನು॥

ಪಲವುಕಾಲಂ ಬೇಡಿದೊಂ ಫಲಂ ಕಡೆಯಲ್ಲಿ।
ತಲೆಗೊಯ್ಸಿಕೊಂಬುದೆಂದುಂ ಬಿಡದೆಸುತ ನಾಣ್ಚಿ।
ತಲೆವಾಗಿದುವೊ ಪುತ್ರಮೋಹದಿಂ ಪ್ರತಿದಿನಂ ತನ್ನ ನೋವಂ ನೋಡದೆ॥
ಸಲಹಿದೀ ಭೂದೇವಿಗಂ ನಮಿಸಿ ಭಕ್ತಿಯಿಂ।
ನಲಿದು ಬಾಗಿದುವೊ ಪೇಳೆಂಬಿನಂ ಕಿಕ್ಕಿರಿದ।
ಫಲಭಾರದಿಂ ಕೊರಳ್ವಾಗಿ ಕಂಗೊಳಿಸಿರ್ದ ಶಾಲಿಗಳ್ ಕರಮೆಸೆದುವು॥

ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು।
ಹಿಂಡಿ ರಸಮಂ ತೆಗೆದು ಕಾಸಿ ಕಾಲ್ಗುಳಿಯಲ್ಕೆ।
ಖಂಡಶರ್ಕರೆಯಾದುವೆಗ್ಗೈದೊಡಂ ಸುಗುಣಮಂ ಬಿಡದ ಸುಜನರಂತೆ॥
ದಿಂಡುರುಳ್ಚಿ ದೆವಾಳ್ಗಿದಿರಾದರಂ ಸುಕೋ।
ದಂಡರೂಪಿಂ ಸ್ವಾಮಿಹಿತಕಂದು ತಮ್ಮೊಳು। [ದುದು ॥೪೪॥
ದ್ದಂಡತೆಯ ಬಿರುದತ್ತಿತೆನೆ ಸೋಗೆವಸುರ ಕಬ್ಬಿನ ಕೊಂಬು ಕಣ್ಗೆಸೆ

ಸುರಿವ ಶಾಲ್ಯನ್ನರಾಶಿಗಳ ಘೃತಪೂರಿತದ।
ಹರಿವಿಗಳ ಸೂಪಾದಿಶಾಕಸಂತತಿಯ ಪರಿ। [ಣೆಯ ॥
ಪರಿಯ ಪಚ್ಚಡಿಯುಪ್ಪುಗಾಯ್ಭಕ್ಷ್ಯ ಪರಮಾನ್ನ ಬಹುವಿಧದ ಸೀಕರ
ತರತರದ ದಧಿದುಗ್ಧತಕ್ರದಿಂ ಪುದಿದ ಕೊ।
ಪ್ಪರಿಗೆಗಳನುಂಡುಂಡು ಪೋಪ ನಡೆತಪ್ಪ ಪಥಿ।
ಕರ ನೆರವಿಗಳ ಸತ್ರದಾಲಯಂ ರಂಜಿಸಿದುದಾ ಪಥದೊಳೇನೆಂಬೆನು॥

ಮುಂತೆಸೆದುದಾಗಳಾ ಘನವಿಭವದಿಂ ಮುಕ್ತಿ।
ಕಾಂತೆಯುರಮನೆಯಂತೆ ಪುಣ್ಯದಾಲಯದಂತೆ।
ಸಂತತಂ ಶೈವಸೇವಾದ ಕೋಶಗೃಹದಂತೆ ಧರೆಯ ಮುಖಕಮಲದಂತೆ॥
ತಿಂತಿಣಿಯೊಳೆಸೆವ ಸೌಧಂಗಳ ಮರೀಚಿ ಗಗ।
ನಾಂತಮಂ ಚುಂಬಿಸಲ್ ಸಕಲಸೌಭಾಗ್ಯಮಂ।
ತಾಂ ತಳೆವ ಪಟ್ಟಣಂ ಕಲ್ಯಾಣಮೆಸೆವ ಜಾಣರ ತಾಣಮೊಪ್ಪಿರ್ದುದು॥

ಪೊಸತೆಂಗು ಕೌಂಗು ಪೇರಿಳೆ ಕಿತ್ತಿಳೆಗಳು ಶೋ ।
ಭಿಸುವಂಚೆ ಕೊಂಚೆ ಪೂವಂಡು ಗಿಳಿವಿಂಡು ರಂ । [ಕೊಳಂ ॥
ಜಿಸುವ ತಾವರೆಲೆ ಸಮವಾವು ಪೂವು ಬಕುಳಂ ಮುಕುಳವೊಪ್ಪುವ
ಮಿಸುಪ ನಳಿನಂ ಪುಳಿನಮುಂ ತುಂಬಿ ತುಂಬಿ ರಾ ।
ಜಿಸುವಶೋಕಂ ಕೋಕಮಾದಾಡಿಮಂ ಹಿಮಂ ।
ಸೆಗಂಪು ಸೊಂಪು ಪೆಂಪಿಂದಾಪುರೋಪವನಮುಸೆದಿರ್ದುದೇನೆಂಬೆನು ॥

ಸೋರ್ವ ರಸವಣ್ಗಳಿಂ ತಾಳ್ದ ಚೂತಂ ತುದಿಗೆ ।
ಪರ್ವಿದೆಲೆವಳ್ಳಿಯಿಂದೆಸೆವ ಪೂಗಂ ನಾಡೆ ।
ಕೊರ್ವಿ ತಿಂತ್ರಿಣಿವಣ್ಗಳಿಂತ ಕದಳಂ ಬಿರಿದೆವಣ್ಬಿರಿದ ದಾಡಿಮಚಯಂ ॥
ಜೇರ್ವರಸಿ ತುಟಿಪರಂ ಕಾತ ಪನಸಂಗಳ್ ।
ನೀರ್ವೊನಲುಮಂ ಕಱೆವ ತೆಂಗು ಕಿಸುವಣ್ಮಾಸುಳಿ ।
ತೋರ್ವ ನಾರಂಗಜಂಬೀರಮಿಸಿತುಂ ನಾಡೆ ಸರ್ವಕಾಲಂ ಕುಂದವು ॥

ಸುರವನದೊಳಾಂ ಸುತ್ತಿಸಿಕೊಂಡೆನೇ ನಾಡೆ ದಶ ।
ಶಿರನ ವನದಂತೆ ಕಪಿಯಿಂ ಭಂಗಪಡೆದೆನೇ ।
ನಿರುತಮಾಘನದವನದಂತೆ ರಾಕ್ಷಸರ ಕಾಲ್ದಳಿತಕ್ಕೆ ಪಕ್ಕಾದೆನೇ ॥
ಸರಿಯೆ ಲೋಕದ ವನಂ ತನಗೆಂಬ ಪೆರ್ಮೆಯಿಂ ।
ಮೊರೆವ ತುಂಬಿಗಳಿಂದೆ ಪರಪುಟ್ಟಸಿಂದೆ ಬಿ । [ದುದು ॥೪೪೫॥
ತ್ತರಿಸಿ ಪಾಡಿಸಿ ಪೊಗಱಿಪಂತೆ ಪುರವಂ ಬಳಸಿದುಪವನಂ ಕಣ್ಗೆಸೆ

ನವಿಲ ನಟನೆಯೆ ನರ್ತನಂ ಮೊರೆವ ತುಂಬಿಗಳ ।
ರವಮೆ ಗೀತಂ ಕೋಕಿಲಧ್ವನಿಯೆ ವಾದ್ಯವೊ । [ಮಾಗೆ ॥
ಪ್ಪುವ ಮರುತನಿಂ ಕೆದರ್ವ ಕುಸುಮಂಗಳಸೆವ ಪುಷ್ಪಾಂಜಲಿಗಳಂದ
ನವಪಾತ್ರಮುಂ ವಸಂತಂ ತಿದ್ದಿ ತಂದಂಗ ।
ಭವನ ಮುಂಪಾಡಿಸಲ್ ಸಮೆದರ್ದ ಸಲ್ಲಾಸ್ಯ ।
ಭವನದಂತೊಪ್ಪಿರ್ದುದುಪವನಂ ಜನಪದದ ಜನರಿಗಚ್ಚರಿಯಿಮಾಯುತ್ತ ॥

ಸರಸಿಯೊಳಗಾಡುವರಸಂಚೆಯಿಂ ಕೊಂಚೆಯಿಂ ।
ಬಿರಿವ ಮುಗುಳ್ಗಳುಗುವ ಮಧೂಳಿಯಿಂ ಗಾಳಿಯಿಂ ।
ವರಫಲವನುಂಬ ಪೊಕ್ಕುಳಿಗಳಿಂ ಗಿಳಿಗಳಿಂ ಲತೆವನೆಗಳೋವರಿಯೊಳು ॥

ಹರುಷದಿಂದೊಪ್ಪುವ ಜನಾಳಿಯಿಂ ಕೇಳಿಯಿಂ |
ಮೊರೆವ ನಾನಾಪಕ್ಷಿಜಾಳದಿಂ ಮೇಳದಿಂ |
ದರಲ್ವ ಪೂಗಳ ಸೊಗಸುಗಂಪಿನಿಂ ಪೆಂಪಿನಿಂ ವನವನಂಗಳ್ಮೆಱೆದುವು ||

ಅಲ್ಲಿಗಲ್ಲಿಗೆ ಲತಾಮಂಟಪಂಗಳು ನೋಡ ||
ಲಲ್ಲಿಗಲ್ಲಿಗೆ ತಳಿರ ಚಪ್ಪರಂಗಳು ಬೞಿ |
ಕ್ಕಲ್ಲಿಗಲ್ಲಿಗೆ ಪೂಗಳಿಂ ಸಮೆದು ತೋರ್ಪ ಚಾಪಡಿಮಲಗುಮಾಡಂಗಳು ||
ಅಲ್ಲಿಗಲ್ಲಿಗೆ ಮಾಡುವೆಟ್ಟುತಳಿರುಯ್ಯಲೆಗ |
ಳಲ್ಲಲ್ಲಿ ಪನ್ನೀರ ಕಾಲ್ಗಳುವೆಟ್ಟಗಗ |
ಳಲ್ಲೆಡೆಯೊಳಿಂತು ಸಾಹಸ್ರಯೋಜನವನಂ ಕಣ್ಗೆಸೆವುದೇನೆಂಬೆನು ||

ತಳಿರ ಗುಡಿ ತೋರಣದ ಸಾಲ್ಗಳಿಂದೆಡೆಗಡೆಗೆ |
ತೊಳಪ ಮುಕುಳದ ಮಕರತೋರಣಗಳಿಂದೆ ಪೂ | [ಳಿಸುವ ||
ಗಳ ಕುಱುಜು ದೊಡ್ಡ ಮೇರುವೆಗಳಿಂ ಪವಣ ನೆಲೆನೆಲೆಗಳೊಳು ಕಂಗೊ
ನಲಿದು ನರ್ತಿಸುವ ಪೂವಲಿಗೆದರ್ಪ ಕಲಿತಪರಿ |
ಮಳಜಲಂಗಳನೆ ಜೇರ್ಕೊಳ್ಳಿಯಿಂದಿಸುವ ಪೂ | [ವನು ||೪೪೯||
ಗಳ ಬೊಂಬೆಗಳ ಸಾಲ್ಗಳಿಂದ ಚೆಲ್ವಾದುದಾಬನವದೇಂ ವರ್ಣಿಸು

---

## ಸುಭಾಷಿತ.

ಬಹಳ ಪ್ರಸಿದ್ಧವಾದ ಪುರಾತನ ಕವಿಗಳ ಗ್ರಂಥಗಳಲ್ಲಿ ರಸಭರಿತವಾಗಿಯೂ, ಶ್ರಾವ್ಯವಾಗಿಯೂ, ಲೋಕಕ್ಕೆ ನೀತಿಬೋಧಕಗಳಾಗಿಯೂ ಇರತಕ್ಕ ಪದ್ಯಗಳು ಅಲ್ಲಲ್ಲಿ ಹೇರಳವಾಗಿ ಸಿಕ್ಕುತ್ತವೆ. ಇವನ್ನು ವಿಶೇಷವಾದ ಕಾವ್ಯಪರಿಚಯವುಳ್ಳ ಕನ್ನಡಪಂಡಿತರೂ ಕವಿಗಳೂ ತಮ್ಮ ಅನುಕೂಲ್ಯಕ್ಕೋಸ್ಕರವೂ ಲೋಕಹಿತಾರ್ಥವಾಗಿಯೂ ಶೇಖರಮಾಡಿ ಸುಭಾಷಿತ, ಸುಭಾಷಿತಮುಕ್ತಕ, ಕಾವ್ಯಸಾರ, ಶತಕ ಮುಂತಾದ ಹೆಸರುಗಳಿಂದ ಪ್ರಸಿದ್ಧಪಡಿಸಿರುವರು. ಇಂತಹ ಸಂಗ್ರಹಗಳಲ್ಲಿ "ಸುಭಾಷಿತ" ವೆಂಬುದೂ ಒಂದು. ಇದರಿಂದ ಕೆಲವು ಪದ್ಯಗಳು ಮುಂದೆ ಮಾದರಿಗಾಗಿ ಉದ್ಧರಿಸಲ್ಪಟ್ಟವೆ.

---

## ಸುಭಾಷಿತ.

### ೩೪. ವಿದ್ಯಾಭ್ಯಾಸ.

ಕಂ॥ ಮಕ್ಕಳಿಗೆ ತಂದೆ ಬಾಲ್ಯದೊ ।
ಳಕ್ಕರವಿದ್ಯೆಗಳನಱಿಸದಿರ್ದೊಡೆ ಕೊಂದಂ ॥
ಲಕ್ಕಧನಮಿರಲು ಕೆಡುಗುಂ ।
ಚಿಕ್ಕಂದಿನ ವಿದ್ಯೆ ಪೊರೆಗು ಚೂಡಾರತ್ನಾ ॥೪೫೦॥

ಬರೆಯದ ಕೈ ಬಂಧುಗಳಂ ।
ಪೊರೆಯದ ಕೈ ಸುತರನೆತ್ತಿಕೊಂಡಾಡದ ಕೈ ।
ಕರೆದು ಬುಧರ್ಗೀಯದ ಕೈ ।
ಮರಗೈಮರಳ್ಗೈಗಳಂತೆ ಚೂಡಾರತ್ನಾ ॥೪೫೧॥

ಕಂ॥ ಓದದ ಬಾಯಮೃತಾನ್ನವ ।
ಮೋದದ ಬಾಯ್ ಸಜ್ಜನರ್ಕಳಂ ಪ್ರಿಯದಿಂದಂ ॥
ಆದರಿಸದ ಬಾಯುದು ತಾಂ ।
ಮೇದಿನಿಯೊಳ್ ಬಿಲದ ಬಾಯೆ ಚೂಡಾರತ್ನಾ ॥೪೫೨॥

ಬರೆವುದು ವಾಚಿಪುದಲಸದೆ ।
ಪರಿಚಾರಿಪುದಲ್ಲಿಗಲ್ಲಿ ಬಲ್ಲನಿಬರೊಳಂ ॥
ಸರಸಪ್ರಸಂಗಗೈಯ್ಯಲು ।
ಸರಸಿಜಭವರಾಣಿಯೊಲಿಯದೇಂ ಮೊಣ್ಣಪಳೇ ॥೪೫೩॥

ಓದಿನೊಳಲ್ಲದೆಯಿಹಪರ ।
ಸಾಧನಸಂಪತ್ತ್ಯಮಾಗದದು ಕಾರಣದಿಂ ।
ಓದುವುದು ಸಕಲಶ್ರುತಮಂ ।
ಭೇದಿಸಲಳವಪ್ಪುದಲ್ತೆ ಚೂಡಾರತ್ನಾ ॥೪೫೪॥

ಮ॥ಸ್ರ॥ ಇದು ಲಕ್ಷ್ಮೀಸಂನಮಾಸಜ್ಜಲಧಿಗಿದು ಮಹಾಯಾನಪಾತ್ರಂ [ನಿಯೋಗ ।
ಕ್ಕಿದು ಮುಖ್ಯಂ ಕಳ್ಳಕೊಂಬಂಗರಿದು ಹೃದಯಸುಸಾಯಿ [ತಾಂ ಸರ್ವಧರ್ಮ ॥

ಕ್ಕಿದು ಮೊಱಂ ರಾಜವೇಶ್ಯಕ್ಕಿದು ಗುರುಪದವಮುತ್ತ್ಮಂಗನೊಂಗ
[ಕ್ಯಕಾದ್ಯ ।
ಕ್ಕಿದು ಮೇಲಲಸ್ತಂಭವಾವತ್ತ್ರಿಳಗೆ ಮಿಗಿಲು ವಿದ್ಯಾಧನಂ ಸಾರ
[ಮಿತ್ರ ॥೪೫೫॥

ಚಂ॥ ಮುಱಿದು ನರಾಧಿಪಂಗೆ ಕೊಳಬಾರದು ಕಿಚ್ಚಿನೊಳುರ್ಯ್ದ ಬೇ
[ಯದಿ ।
ತ್ತರೆ ಮಗುಳ್ದತ್ತರೊತ್ತದೆ ಪೆರ್ಚುವುದಕ್ಕರವಿದ್ಯೆ ನೀ
[ರೊಳಂ॥
ನೆರೆಯದು ಗಾಳಿಯಿಂ ಕೆಡದು ತಸ್ಕರಬಾಧೆಗಸಾಧ್ಯವಿಂತಿದಂ ।
ಪಿರಿಯದು ನಿಚ್ಚಮೊಂದುವುದುವೊಂದಲಿದಕ್ಕೆ ಪದಕ್ಕೆ ಸಾಧನಂ॥

ಕಂ॥ ಕಿಱಿದಾದ ವಿದ್ಯೆಯಾಗಲಿ ।
ಮೇಲಿವುದು ತನ್ನಲ್ಲಿ ಗುಣಗಳಿರ್ದೊಡೆ ಪಾತ್ರಾ ॥
ಬುಱತೆಯು ನಿರಾದೊಡೆ ತಾಂ ।
ಬಱನಂ ಪಿಂಗಿಸದೆ ಸುಗುಣಪಾತ್ರಕರಂಡಾ ॥೪೫೬॥

ಪಲವೋದಿವನೋದಿ ಮನವಂ ।
ಪೊಲಗೆಡಿಸಲದೇಕೆ ಕಿಱಿವಱಿಂ ನಿಜತತ್ತ್ವವ ॥
ನೆಱೆಯುವೊಡಱಿದೊಡೆ ಸಾಲದೆ ।
ನಲೆ ಬೆಳಗುವ ಗಗನದಗಲವೇ ರವಿಬಿಂಬಂ ॥೪೫೭॥

---

## ಸುಭಾಷಿತ.

## 35. ವಿವಿಧನೀತಿಗಳು.

ಕಂ॥ ನೀತಿಗಳು ಸಕಲಶಾಸ್ತ್ರ ।
ಖ್ಯಾತಿಗಳಱಿವುಳ್ಳ ರಸಿಕಬುಧಜನಚಿತ್ತ ।
ಪ್ರೀತಿಗಳು ಮೂಢತಿಮಿರ ।
ಜ್ಯೋತಿಗಳೆಂದೆನಿಸುತಿಹುವು ಚೂಡಾರತ್ನಾ ॥೧೫೮॥

ನೀತಿಯುಳಿ ನಡೆಯುಬಲ್ಲೊಡೆ ।
ಮಾತಂ ಪರಹಿತವ ನುಡಿಯುಬಲ್ಲೊಡೆ ಸುಜನ ॥
ಪ್ರೀತಿಯನು ಮಾಡಬಲ್ಲೊಡೆ ।
ಯಾತಂಗರಿಮುಂಟೆ ಸುಗುಣರತ್ನಕರಂಡಾ ॥೪೬೦॥

ಗುರುದೈವಂ ವಿದ್ಯಾರ್ಥಿಗೆ ।
ತರುಣಿಗೆ ಪತಿ ದೈವಮುಳಿದ ಮನುಜರ್ಗೆಲ್ಲಂ ॥
ಪೊರೆವನೆ ದೈವಂ ಜಗದೊಳ ।
ಗರಸಿಂಗಂ ಪ್ರಜೆಯೆ ದೈವಮೆಲೆ ಗುಣರತ್ನಾ ॥ ॥೪೬೧॥

ವಚನದೊಳಿಹಪರಸುಖಮುಂ ।
ವಚನದೊಳೇ ದೈವಗತಿಯು ದುರ್ಗತಿಯಕ್ಕುಂ ॥
ವಚನದೊಳರಿಮಿತ್ರತೆಯುಂ ।
ವಚನಾಮೃತದಿಂದೆ ತುಷ್ಟನೀಶ್ವರನ ಯಾ ॥೪೬೨॥

ನಡೆವೆಡೆಯೊಳ್ ನುಡಿವೆಡೆಯೊಳ್ ।
ಕೊಡುವೆಡೆಯೊಳ್ ತನಗೆ ಸಿಂದೆ ಪೂರ್ವದ ತೆಱದಿಂ ॥
ನಡೆವುದು ನುಡಿವುದು ಕೊಡುವುದು ।
ಪಡೆವುದು ಸತ್ಕೀರ್ತಿಯಂ ಪಿದಗ ಲಲಾಮಾ ॥೪೬೩॥

ಆಡಿದ ಜಾಣ್ನುಡಿಯುಂ ಕೊಂ ।
ಡಾಡಿ ಕರಂ ಮೆಚ್ಚ ಬಲ್ಲ ಸಜ್ಜನರೊಳ್ ಮಾ ॥
ತಾಡುವುದಲ್ಲದೆ ಪುರುಷಂ ।
ಮೂಢರೊಳಾಡುವುದೆ ಸುಗುಣರತ್ನಕರಂಡಾ ॥ ॥೪೬೪॥

ರಾಗರಸ ಮಿಗಲು ಸಭೆ ತಳೆ ।
ದೂಗಲು ತಾ ನುಡಿಯುಬಲ್ಲೊಡದ ನುಡಿಯಿನಿಸೊಂ ॥
ದಾಗದಿರೆ ಸೈತು ಮೌನಿಯ ।
ಕೋಗಿಲೆಯಂತಿಹುದು ಸುಗುಣರತ್ನಕರಂಡಾ ॥ ॥೪೬೫॥

ಚಂ॥ ಕುಡದವನವಿತ್ತಮಸ್ಥಿರನ ಪೆಂಪು ಕೃತಘ್ನನ ಸತ್ಯ ಮೋಹನುಂ ।
ಬಿಡದನಯೋಗವಂಜುವನ ಧೀರತೆ ಕೊಲ್ವನ ಧರ್ಮಮಿಚ್ಛೆಯಿಂ ॥
ನಡೆವನ ಕಾರ್ಯ ಲುಬ್ಧಕನ ಮಿತ್ರತೆ ನೀತಿವಿಹೀನನಾಶ್ರಯಂ ।
ಬಡವನ ಯೌವನಂ ಕಡೆಗೆ ನಿಷ್ಫಲಮೈ ಸುಜನೈಕಬಾಂಧವಾ ॥

ಕಂ॥ ಸಾರಗುಣಿಯೊಡನೆ ಮರ್ಗುಣಿ ।
ಭೋರನೆ ಸಲೆ ಪೂಜ್ಯನಪನದೆಂತೆನೆ ಮುಡಿಯೊಳ್ ॥
ಸೌರಭ್ಯಕುಸುಮಸಂಗದಿ ।
ನಾರುಂ ಸಲುವಂತೆ ಸುಗುಣರತ್ನಕರಂಡಾ ॥೪೬೭॥

ಎನಿತು ಜನಮಿರ್ದೊಡೇಂ ತ ।
ನ್ನನುವಱಿತವನೊಬ್ಬನಿಲ್ಲದಿರ್ದೊಡೆ ಶೂನ್ಯಂ ॥
ಘನತರಚಿಕಿತ್ಸೆಯಿಲ್ಲದೊ ।
ಡಿನಿತೌಷಧಮಿರ್ದೊಡೇನು ಚೂಡಾರತ್ನಾ ॥೪೬೮॥

ಸಲ್ಲದ ಬವರಮುಮಂ ತನ ।
ಗಲ್ಲದ ನಂಟರುಮನಿಚೆ ಯುಱಿದ ಸತಿಯುಂ ॥
ಹೊಲ್ಲಹವ ನುಡಿವ ಮನುಜರ ।
ಮೆಲ್ಲನೆ ಬಿಡುವುದು ವಿವೇಕಚಿಂತಾರತ್ನಾ ॥೪೬೯॥

ಆಗದರ ಮನವ ಕಂಡೊಡೆ ।
ಬೇಗನೆ ತೊಲಗುವುದು ತೊಲಗದಿರ್ದೊಡೆ ಸತ್ತಾ ॥
ನಾಗರ ಹೆಡೆನೆೞಲಾಸೆಗೆ ।
ಪೋಗಿ ಸುಖಂ ಬಾೞ್ವೆನೆಂಬ ಕಪ್ಪೆವೊಲಕ್ಕುಂ ॥೪೭೦॥

---

## ಸೋಮೇಶ್ವರಶತಕ.

ಈ ಗ್ರಂಥವನ್ನು ಮಾಡಿದ ಕವಿಗೆ ಸೋಮೇಶ್ವರ ಅಥವಾ ಸೋಮನಾಥ ಎಂದು ಹೆಸರು. ಈತನು ಸುಮಾರು ಹದಿನಾಲ್ಕನೆಯ ಶತಮಾನದ ಆದಿಯಲ್ಲಿ ಪ್ರಸಿದ್ಧಿಗೆ ಬಂದಂತೆ ಕಾಣುತ್ತದೆ. ಈತನು ಗೋದಾವರಿ ಡಿಸ್ಟ್ರಿಕ್ಟಿನಲ್ಲಿರುವ ಪಾಲ್ಕುರಿಕೆಯೆಂಬ ನಗರದಲ್ಲಿ ಜನಿಸಿದನು. ಜಾತಿಯಲ್ಲಿ ಈತನು ಆರಾಧ್ಯಬ್ರಾಹ್ಮಣನಾಗಿದ್ದು ಲಿಂಗವಂತಮತವನ್ನು ತೆನುಗುದೇಶದಲ್ಲಿ ಪ್ರಚಾರಮಾಡುವುದಕ್ಕಾಗಿ ಉಜ್ಜುಗಿಸಿ, ಬಸವಪುರಾಣವನ್ನು ತೆನುಗುಭಾಷೆಯಲ್ಲಿ ಬರೆದನು. ಮೇಲೆ ಹೇಳಿದ ಎರಡು ಗ್ರಂಥ

ಗಳಲ್ಲದೆ, ಈತನು ಗಣಸಹಸ್ರನಾಮವೆಂಬ ಮತ್ತೊಂದು ಶೈವಗ್ರಂಥ ವನ್ನೂ ಬರೆದು ಹೆಸರುಗೊಂಡನು. ಈತನು ಬರೆದ ತೆಲುಗು ಬಸವ ಪುರಾಣವೇ ೧೩೬೯ ರಲ್ಲಿ ಭೀಮಕವಿಯಿಂದ ರಚಿಸಲ್ಪಟ್ಟ ಕನ್ನಡ ಬಸವ ಪುರಾಣಕ್ಕೆ ಆಧಾರವಾಯಿತೆಂದು ಹೇಳುವರು. ಶಿವಶರಣರಲ್ಲಿ ಒಬ್ಬನಾದ ದೀಪದ ಕಲಿಯ ಚರಿತ್ರವನ್ನು ಕೂಡ ಈತನು ಬರೆದಿರುವಂತೆ ಕಿಂವ ದಂತಿ ಇದೆ. ಈತನ ಇಷ್ಟಲಿಂಗವು ಪುಲಿಗಿರಿ ನಗರದಲ್ಲಿರುವುದು ಈ ತನು ಕಲ್ಲೆಯ ಎಂಬ ಸ್ಥಳದಲ್ಲಿ ಕಾಲವಾದನು.

ಮತ್ತೇಭವಿಕ್ರೀಡಿತವೃತ್ತದಲ್ಲಿ ಬರೆದಿರುವ ಸೋಮೇಶ್ವರಶತಕದ ಪದ್ಯಗಳಲ್ಲಿ ಕೆಲವನ್ನು ಮಾದರಿಗಾಗಿ ಮುಂದೆ ಉದ್ಧರಿಸಿದೆ. ಈ ಶತಕದ ಪದ್ಯಗಳು ರಾಜನೀತಿ, ಲೋಕೋಕ್ತಿ, ಜನಗಳಿಗೆ ಹಿತಕರವಾಗಿರುವ ನ ಡೆವಳಿಕೆ ಈ ಸಂಗತಿಗಳಿಗೆ ಸಂಬಂಧಪಟ್ಟ ಸಾಮಾನ್ಯನೀತಿಗಳನ್ನು ತಿಳಿಸುತ್ತವೆ. ಇವುಗಳನ್ನು ಓದುವ ಕನ್ನಡಿಗರು ಸಿಕ್ಕುವುದು ಅಪೂ ರ್ವ. ಜೈಮಿನಿ ಭಾರತದಲ್ಲಿ ಹೇಗೋ ಹಾಗೆ ಇವರಲ್ಲಿಯೂ ಜನಗಳಿಗೆ ಅಭಿರುಚಿ ಹೆಚ್ಚು.

---

## ೩೮. ಸೋಮೇಶ್ವರಶತಕ.

### ಮತ್ತೇಭವಿಕ್ರೀಡಿತವೃತ್ತ.

ಕೆಲವಂ ಬಲ್ಲವರಿಂದೆ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತುಂ ।
ಕೆಲವಂ ಮಾಳ್ಪವರಿಂದೆ ಕಂಡು ಕೆಲವಂ ಸುಜ್ಞಾನದಿಂ ನೋಡುತಂ ।
ಕೆಲವಂ ಸಜ್ಜನಸಂಗದಿಂದಲಱಿಯಲ್ ಸರ್ವಜ್ಞನಪ್ಪಂತೆ ಕೇಳ್ ।
ಪಲವುಂ ಪಳ್ಳ ಸಮುದ್ರಮಪ್ಪ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೧॥

ಇಱಿಯಲ್ಬಲ್ಲೊಡೆ ವೀರನಾಗು ಧರೆಯೊಳ್ ನಾನಾಚಮತ್ಕಾರಮಂ ।
ಅಱಿಯಲ್ಬಲ್ಲೊಡೆ ಮಂತ್ರಿಯಾಗು ವಿಭುವ ಗಾಱೆಂದೊಡಂ ಕೋಪಮಂ ॥
ತೊಱೆಯಲ್ಬಲ್ಲೊಡೆ ಯೋಗಿಯಪ್ಪುದರಿಷಡ್ವರ್ಗಂಗಳಂ ಗೆಲ್ವುದಂ ।
ತೆಱಬಲ್ಲರ್ಪೊಣೆಯಪ್ಪುದೈ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೨॥

ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನಮಂ ।
ಬಿಡಬೇಕೈ ಧನಲೋಭಮಂ ಸ್ವಜನದೊಳ್ ದುಷ್ಟಾತ್ಮರೊಳ್ ಗೋಷ್ಠಿಯಂ ॥
ಇಡಬೇಕೀಶ್ವರನಲ್ಲಿ ಭಕ್ತಿರಸಮಂ ವಿಶ್ವಾಸಮಂ ಸ್ವಾಮಿಯು ।
ಳ್ಳಿಡಬೇಕಿರ್ದುಣಬೇಕೆಲೈ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೩॥

ಮಡೆಯುಂಗುತ್ತಮವಿದ್ಯೆ ಬಿಟ್ಟ ಕುಮುದಂಗಂ ಮಾರ್ಗವೇ ಬಿಟ್ಟ ಕೇಳ್ ।
ಬುಧವಂಗೆಲ್ಲರ ವೈರ ಬಿಟ್ಟ ಜಪದೇಹಂಗುಜ್ಜುಗಂ ಬಿಟ್ಟಮು ॥
ವೃಷಸಿಪಾರ್ತಗೆ ಪೆಣ್ಣು ಬಿಟ್ಟ ರಣಾವೇ ಪಿರ್ಪಟ್ಟ ಮೂಲೋಕದೊಳ್
ಕಡುಲೋಭಂಗಿಡೆ ಬಿಟ್ಟುದೈ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೪॥

ಪ್ರಜೆಯಂ ಪಾಲಿಸಬಲ್ಲಡಾತನರಸಂ ಕೈಯಾಸೆಯಂ ಮಾಡದಂ ।
ನಿಜಮಂತ್ರೀಶ್ವರ ತಂದೆತಾಯ ಸಲಹಲ್ಬಲ್ಲಾತನೇ ಧಾರ್ಮಿಕಂ ॥
ಭಜಕಂ ದೈವದೆ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ ।
ದ್ವಿಜನಾಚಾರತೆಯುಳ್ಳನಂ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೫॥

ಸರಿಯೇ ಸೂರ್ಯಗೆ ಕೋಟಿ ಮಿಂಚುಬುಳುಗಳ್ ನಕ್ಷತ್ರಸಪ್ತಾದೊಡಂ ।
ದೊರೆಯೇ ನಿಂದುಗೆ ಜೀವರತ್ನಕಣೆಯೇ ಮಿಕ್ಕಿದ ಪಾಷಾಣವಾ ॥
ಪುರಗೋವಿಂದ್ರಂಗೆ ಸಮಾನವಾಗಿಪುದೆ ಮಿಕ್ಕಾದಾಸಸುಪರ್ವಪ್ರಸ ।
ಕ್ಕರೆಗುಪ್ಪಂ ಸರಿಮಾಪ್ಪುರೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೬॥

ಹಿತಮಂ ತೋರುವನಾತ್ಮಬಂಧು ಪ್ರೀತಿನಾತಂ ತಂದೆ ಸಾಧ್ವೀತ್ವದಾ ।
ಸತಿಯೇ ಸತ್ಯಕೆ ಸಾಧನಂ ಕಲಿಸಿದಾತಂ ವರ್ಣಮಾತ್ರಂ ಗುರು ॥
ಮತಮಾರ್ಗಂಬಿಡಿದಾತ ಸುವ್ರತಿ ಮಹಾಸದ್ವಿದ್ಯೆಯೇ ಪುಣ್ಯಮಂ ।
ಸುತನೇ ಸದ್ಗತಿದಾತನೈ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೭॥

ಧರೆಬೀಜಂಗಳ ನುಂಗೆ ಬೇಲಿ ಪೊಲನೆಲ್ಲಂ ಮೇದೊಡಂ ಗಂಡ ಪೆಂ ।
ಡಿರನತ್ಯುಗ್ರದೆ ಶಿಕ್ಷಿಸಲ್ ಪ್ರಜೆಗಳಂ ಭೂಪಾಲಕಂ ಬಾಧಿಸಲ್ ॥
ತರುವೇ ಪಣ್ಗಳ ಮೆಲ್ಲೆ ಮಾತೆ ವಿಷಮಂ ಪೆತ್ತರ್ಭಕಂಗೂಡಿಸಲ್
ಹರ ಕೊಲ್ಲಲ್ ಪಿಡಿಕಾವನೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೮॥

ಚರಿಪಾರಣ್ಯಕಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ ।
ಮರಗಳ್ ಪುಟ್ಟುವೆ ಪುಷ್ಪವೊಂದು ಬೞಲಲ್ ಭೃಂಗಕ್ಕೆ ಪೂವಿಲ್ಲವೇ ॥
ದುರುಳಂ ಸತ್ಕವಿಗೊರ್ವ ಗರ್ವಿ ಪುಸಿಯುಂ ತಾಂ ಪೇೞ್ದೊಡೇಂ [ಲೋಭದಿಂ
ಧರೆಯೊಳ್ ದಾತರು ಪುಟ್ಟರೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೭೯॥

ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧಬೀಜಂ ಕೆಲಂ ।
ಸಿಡಿದುಂ ಪೆರ್ಮರನಾಗದೇ ಎಳಗಱುಂ ಎತ್ತಾಗದೇ ಲೋಕದೊಳ್ ॥
ವಿಡಿ ಪಣ್ಣಾಗದೆ ದೈವದೊಲ್ಮೆಯಿರಲಾ ಕಾಲಾನುಕಾಲಕ್ಕೆ ಪೇೞ ।
ಬಡವಂ ಬಲ್ಲಿದನಾಗನೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೮೦॥

ಉಣದಿರ್ಪಾ ಧನವಿರ್ದೊಡೇನು ಸುತಸಿರ್ದೇಂ ಮುಪ್ಪಿನಲ್ಲಾಗದಾ ।
ಪೊಣಗಲ್ವೈರಿಗೆ ಬಾರದಿರ್ದ ಮಱೆ ತಾಂ ಬಂದೇನದಾಪತ್ತಿನೊಳ್ ॥
ಮಣಿದುಂ ನೋಡದ ಬಂಧುವೇತಕೆಣಿಸಲ್ ಕಾಲೋಚಿತಕ್ಕೈದಿದಾ ।
ತೃಣವೇ ಪರ್ವತವಲ್ಲವೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೮೧॥

ಕವಿಯೇ ಸರ್ವರೊಳುತ್ತಮಂ ಕನಕವೇ ಲೋಹಂಗಳೊಳ್ ಶ್ರೇಷ್ಠ ಜಾ।
ಹ್ನವಿಯೇ ತೀರ್ಥದೊಳುನ್ನತಂ ವಸನದೊಳ್ ಶುಭ್ರಾಂಬರಂ ವೆಗ್ಗಳಂ॥
ರವಿಯೆಲ್ಲಾಗ್ರಹಕಂ ವರಂ ರಸಗಳೊಳ್ ಶೃಂಗಾರವೇ ಬಲ್ಮೆ ಕೇಳ್ ।
ಶಿವನೇ ದೈವ ಜಗಂಗಳೊಳ್ ಹರಹರಾ ಶ್ರೀಚೆನ್ನಸೋಮೇಶ್ವರ॥೪೮೨।

ರವಿಯಾಕಾಶಕೆ ಭೂಷಣಂ ರಜನಿಗಂ ಚಂದ್ರಂ ಮಹಾಭೂಷಣಂ ।
ಕುವರಂ ವಂಶಕೆ ಭೂಷಣಂ ಸರಸಿಗಂಭೋಜಾಳಿ ತಾಂ ಭೂಷಣಂ ॥
ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ ।
ಕವಿಯಾಸ್ಥಾನಕೆ ಭೂಷಣಂ ಹರಹರಾ ಶ್ರೀಚೆನ್ನಸೋಮೇಶ್ವರ॥೪೮೩॥

ಅತಿಗಂಭೀರನುದಾರ ಧೀರನುರುಧೀಸಂಪನ್ನ ಸತ್ಯಾತ್ಮನೂ ।
ರ್ಜಿತ ನಾನಾಲಿಪಿಭಾಷೆಯೊಳ್ ಪರಿಚಿತಂ ಲಂಚಕ್ಕೆ ಕೊಟ್ಟಾಡದಾ ॥
ವ್ರತಸದ ರ್ಮವಿಚಾರಸಾರ ಚತುರೋಪಾಯಂಗಳಂ ಬಲ್ಲನ ।
ಪ್ರತಿಕಾರ್ಯಂ ವರಮಂತ್ರಿಯೈ ಹರಹರಾ ಶ್ರೀಚೆನ್ನಸೋಮೇಶ್ವರ॥೪೮೪

ಸುರೆಯುಂ ಸೇವಿಸುವಾತ ಬಲ್ಲನೆ ಮಹಾಯೋಗೀಂದ್ರರೆಂದೆಂಬುದಂ ।
ದೊರೆಯೊಳ್ ತೇಜವನಾಂತವಂ ಬಡವರಂ ತಾಂ ಕಾಣ್ಬನೇ ಕಣ್ಗಳಿಂ ॥

ಪಿರಿಯರ್ ಮಾನಿತರೆಂದು ಕಾಣ್ಬನೆ ಮಹಾದುರ್ಮ್ಮಾರ್ಗಿಯೆಂತಾದೊಡಂ।
ದುರುಳಂ ಬಲ್ಲನೆ ಬಾಳ್ವಿರಂ ಹರಹರಾ ಶ್ರೀಚೆನ್ನಸೋಮೇಶ್ವರ ॥೪೮೫॥

ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇನಪ್ಪನೇ।
ಕಡುಪಾಪಂ ಬಲು ಮೀಯಲಾತ ಶುಚಿಯೇ ಕಾಕಾಳಿಯೇಂ ಮೀಯವೇ॥
ಗುಡಪಾನಂಗಳೊಳಿರ್ದ ಬೇವಿನ ಫಲಂ ಸ್ವಾದಪ್ಪುದೇ ಲೋಕದೊಳ್।
ಮಡಿ ತಾಂ ನಿರ್ಮ್ಮಲಚಿತ್ತವೈ ಹರಹರಾ ಶ್ರೀಚೆನ್ನಸೋಮೇಶ್ವರ ॥೪೮೬॥

ಕುಲದೊಳ್ ಕೂಡರು ಕೂಸನೀಯರು ನೃಪರ್ ನಿಷ್ಕಾರಣಂ ದಂಡಿಪರ್॥
ಪೊೞಲೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ ಸಾಲಿಗರ್।
ಕಲುಗುಂಡಂ ಗಡ ಪೇೞುವರ್ ತೊಲಗಿರಲ್ ಲಕ್ಷ್ಮೀಕಟಾಕ್ಷಂ ಕ್ಷಣಂ ।
ನೆಲ ಮುಟ್ಟಲ್ ಮುನಿದಪ್ಪುದೈ ಹರಹರಾ ಶ್ರೀಚೆನ್ನಸೋಮೇಶ್ವರ ॥

ಪುರದುರ್ಗಂಗಳ ಬಲ್ಮೆಮಾಡದೆ ಜನಕ್ಷೋಭಂಗಳಂ ನೋಡದೆ ।
ಲ್ಲರ ವಿಶ್ವಾಸಿಗಳೆಂದು ನಂಬಿ ಬಹುದಂ ಪೋದಪ್ಪುದಂ ಕಾಣದಾ ॥
ತುರದಿಂದುಂಡತಿನಿದ್ರೆಗೆಯ್ದು ಮದನಂಗಾಳಾಗಿಹಂ ಲೋಕದೊಳ್ ।
ದೊರೆಯೇ ಸೊಕ್ಕಿದ ಕೋಣನೈ ಹರಹರಾ ಶ್ರೀಚೆನ್ನಸೋಮೇಶ್ವರ ॥

ಚಿಗರೆಂದುಂ ಮೇಲೆ ಬೇವು ಸ್ವಾದುವಹುದೇ ತೇೞ್ ಚಿಕ್ಕದೆಂದಟ್ಟಿರಿಂ।
ತೆಗೆಯಲ್ ಕಚ್ಚದೆ ಪಾಲನೂಡಿ ಪುಲಿಯುಂ ಸಾಕಲ್ಕೆ ವಿಶ್ವಾಸಿಯೇ ॥
ಖಗನಂ ಸಾಕುವೆನೆಂದು ಗೂಗೆಮಱಿಯುಂ ಸಂಪ್ರೀತಿಯಿಂದೋವರೇ
ಪಗೆಯುಂ ಬಾಲಕನೆಂಬರೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೮೯॥

ಮುಕುರಂ ಕೈಯೊಳಿರಲ್ಕೆ ನೀರ ನೆೞಲೇಕೈ ತಾಂ ನೆಗೞ್ದುರ್ವಮೂ।
ಟಕೆ ಗೊಡ್ಡಾಕಳನಾಳ್ವರೇ ಗುಣಯುತರ್ ಪಾಲುಂಡು ಮೇಲುಂಬರೇ ॥
ಶುಕನೋದಿಂಗುಱೆ ಚೆಲ್ವೆ ಕಾಕರವ ರಂಭಾನೃತ್ಯದಿಂ ಡೊಂಬರೇ ।
ಸಖರಿಂದುನ್ನತನಸ್ಸುವೇ ಹರಹರಾ ಶ್ರೀಚೆನ್ನಸೋಮೇಶ್ವರ ॥೪೯೦॥

## ನೀತಿಸಾರ.

ಇದು ಅನೇಕ ಗ್ರಂಥಗಳಿಂದ ಶೇಖರಮಾಡಿ ಅಚ್ಚುಮಾಡಲ್ಪಟ್ಟ ಕನ್ನಡಪದ್ಯಗಳ ಸಂಗ್ರಹ. ಈ ಸಂಗ್ರಹಕ್ಕೆ "ನೀತಿಸಾರ" ವೆಂದು ಹೆಸರು. ಇದರಲ್ಲಿ ಸುಮಾರು ಒಂದು ಸಾವಿರ ಪದ್ಯಗಳಿಗೆ ಮೇಲಿವೆ. ಅನೇಕ ಕವಿಗಳು ರಚಿಸಿರುವ ಚಿಲ್ಲರೆ ಗ್ರಂಥಗಳಿಂದಲೂ ಉದ್ಗ್ರಂಥಗಳಿಂದಲೂ ಪದ್ಯಗಳನ್ನು ಉದ್ಧರಿಸಿ ಇಲ್ಲಿ ಶೇಖರಮಾಡಿದೆ. ಕೆಲವು ಪದ್ಯಗಳ ಕೊನೆಯಲ್ಲಿ "ಚೂಡಾರತ್ನ" "ಸುಜನೋತ್ತಂಸ" ಎಂಬ ಅಂಕಿತಗಳು ಕಾಣುತ್ತವೆ. ಇವು ಅಂತಹ ಬಿರುದುಗಳುಳ್ಳ ಕವಿಗಳ ಗ್ರಂಥದಿಂದ ತೆಗೆದುವುಗಳೆಂದು ಭಾವಿಸಬೇಕು.

---

## 37. ನೀತಿಸಾರ.

ಕಂ॥ ಗುಣಹೀನನಗಧೋಗತಿ ನಿಜ ।
ಗುಣಿಗಂ ಸ್ವರ್ಗಾದಿಭೋಗಮಕ್ಕುಮೊಲ್ಕು ॥ ರಾ
ಗುಣಹೀನರ ಸಿರಿಯಿಂದಂ ।
ಗುಣಿಗಳ ಬಡತನವೆ ಲೇಸು ಚೂಡಾರತ್ನ ॥೪೯೧॥

ಕಂಡುದ ನುಡಿಯಲ್ಕಾಗದು ।
ಕಂಡರೆ ಕಡೆಗಣಿಸಿ ಕಳವು ಪೆಱರವೆಗುಣಮಂ ॥
ಕೊಂಡೆಸಗದವನೆ ಸದ್ಗುಣಿ ।
ಕಂಡುಂ ಕಾಣದವೊಲಿರ್ಪೊಡಾತನೆ ಚದುರಂ ॥೪೯೨॥

ಉಕ್ಕದೆ ಬಿಕ್ಕದೆ ಲಿಪಿಯುಂ ।
ಸಕ್ಕದೆ ತನವರಿಸದೆಸಹಸುಡುಹದೆ ಸವಿ ॥
ಟ್ಟಕ್ಕರಬಣಿತೆಯೊಳೋದುವು ।
ಪಕ್ಕರಿಗರ ಮಾರ್ಗನಲ್ತೆ ಚೂಡಾರತ್ನ ॥೪೯೩॥

ಎಡಱದೆ ತಡೆಯದೆ ತಲೆಯುಂ ।
ಕೊಡಹದೆ ಸವಿಲಿಜಾರ್ ಡ್ಯಾನಿಸದೆ ರಸಮುಂ ॥
ಕೆಡಿಸದೆ ಸರ್ವರ ಚಿತ್ತ ।
ಕ್ಕೊಡಬಡಲೋದುವನೆ ಗಮಕಿ ಚೂಡಾರತ್ನ ॥೪೯೪॥

ಬಲ್ಲವರಂ ಬಸಗೊಳ್ಳದೆ ।
ಕಲ್ಲದೆತನದಿಂದ ತಾವೆ ನುಡಿವುದು ಘನಮಂ ॥
ದೆಲ್ಲರೊಳು ಪೋರಾಸಂಗಂ ।
ಬಲ್ಲಿವರಾರುಂಟು ಧರೆಗೆ ಚೂಡಾರತ್ನಾ ॥೪೯೫॥

ಕನ್ನಡಿಯಂ ತೋಱುದೊಪ ।
ತ್ಯುನ್ನತಸಲ್ಲಕ್ಷಣಂಗೆ ಮುಳಿಸಾಗದು ಹಾ ॥
ಯೆನ್ನದೆ ಮೂಕೊಯಿಯುಂಗಾ ।
ಕನ್ನಡಿಯುಂ ತೋಱದೆ ಪಾಪಿ ವ್ಯಂಗಂ ಬಱಿಗಂ ॥೪೯೬॥

ಚಂ॥ ಮೊಸಿಸಿರೆ ಕಚ್ಚದೇಕೆ ಪಯೊಯುಳ್ಳೊಡೆ ದಾನಮದೇಕೆ ಸಂತಸಂ।
ಜಸಿಯಿನಲರ್ಥಮೇಕೆ ಗುಣಮುಳ್ಳೊಡೆ ಭೂಷಣಮೇಕೆ [ಮೋಹಬಂ
ಧನಮಿರೆ ಪಾಪಮೇಕ ಜಡಭಾವವಿರಲ್ ಶ್ರುತಮೇಕೆ ತತ್ತ್ವಭಾ ।
ವನೆ ತನಗಾಗೆ ಮುಕ್ತಿಮುತಮೇಕೆ ವಿಚಾರಪರಂಗೆ ಲೋಕದೊಳ್॥

ಕಂ॥ ಅರಿಗಳನೆಱಗಿಪ್ಪುದೆ ಪದಾ ।
ಭರಣಂ ಸಿರಿತಿಗಳನಱಿವಾಕೊಳ್ವುದೆ ಕರ್ಣಾ ॥
ಭರಣಂ ಕೊಡುವುದೆ ಹಸ್ತಾ ।
ಭರಣಂ ಸ್ಯೆಂದನೆಯುವಿರಲು ಸರ್ವಾಭರಣಂ ॥೪೯೮॥

ತುಚ್ಛಗೆ ನೀಚಗೆ ಧನಪತಿ ।
ಹಚ್ಚಿದೊಡೇನಾತ್ಮಭೋಗಪಡೆಯುತಕ್ಕಿಲ್ಲಂ ॥
ಬಚ್ಚಲ ನೀರ್ ಕದಡಿದೊಡೇಂ ।
ಸಿಚ್ಛಳದಿಂ ತಿಳಿದೊಡೇನೊ ಚೂಡಾರತ್ನಾ ॥೪೯೯॥

ಕಾಲೋಚಿತವಱಿತಿತ್ತೊಡೆ ।
ಮೂಲೋಕಮನಿತ್ತ ಸರಿಸಮಾನಮದಕ್ಕುಂ ॥
ಮೇಲೆಡೆಯಾಡಿಸಿ ಕೊಟ್ಟೊಡೆ ।
ಕೂಲಿಗೆ ಸರಿಯಾಗದಿಮುದೆ ಚೂಡಾರತ್ನಾ ॥೫೦೦॥

ಸಿರುಪವುಗುಣಿಯೆನಿಸಿದ ಸ ।
ತ್ಪುರುಷನ ರೂಪೆಂತುಟಾದಡಾತನ ಯೋಗ್ಯಂ ॥
ಪರಿಮಳವನೀವ ಚಂದನ ।
ಗೊರಡುಂ ಮುರುಡಾದೊಡೇನೊ ಸುಜನೋತ್ತಂಸಾ ॥೫೦೧॥

ಕಂ॥ ಸಾಲದೆ ಸೋಲದೆ ಪ್ರೊಡವು ।
ಟ್ಟೋಲೈಸದೆ ನಿಚ್ಚ ಪಯಣವಿಲ್ಲದೆ ತಾಸಿ ॥
ದಾಲಯದೊಳಿರ್ದು ಬಾಳ್ವುದೆ ।
ಭೂಲೋಕಮನಾಳ್ವ ಸುಖದಿಸಗ್ಗಳಮಲ್ತೇ ॥೫೦೨॥

ಭೂಷಣವಾವುದು ಘನ ಸಂ ।
ತೋಷವತಿಸ್ನೇಹವಾವುದಖಿತರೊಳಿಹ ಸಂ ॥
ಭಾಷಣೆ ಮತಿಯಾವುದು ಪರ ।
ದೂಷಣವುಱವುದು ವಿವೇಕಚೂಡಾರತ್ನಾ ॥೫೦೩॥

ಬಡವರ್ ಬಂದರೆ ಬಂಧುಗ ।
ಳೊಡನುಡಿಯರ್ ಮುಂದೆ ಸಿಂದೊಡಂ ಲಜ್ಜಿಸುವರ್ ॥
ಬಡತನವ ಶತ್ರು ಲಕ್ಷ್ಮಿಯೆ ।
ಗಡ ನಂಟಂ ಬೇಱೆ ಬಂಧುಶತ್ರುಗಳುಂಟೇ ॥೫೦೪॥

ತುದಿಗೆಯ್ದುದುವಂ ಫಲಮಿ ।
ಲ್ಲದುದಂ ಪಱಗೇಡುಮಾಳ್ಪುದಂ ಪರಸಂತಾ ॥
ಪದವುಂ ಪರಗತಿವಿಲಯಾ ।
ಸ್ಪದವುಂ ಕಾರ್ಯಮನುಪಾರಮತಿ ನೆಗೞ್ಪನೇ ॥೫೦೫॥

ಬೇವಿನ ಸಸಿಯುಂ ತಂದಿ ।
ಟ್ಟಾವಿನ ನೊಱೆವಾಲನೆರೆದು ಸಲಹಿದೊಡದು ತಾಂ ॥
ಬೇವಲ್ಲದಮೃತವಾಗದು ।
ಗಾವಿಲರೊಡನಾಡಿ ಗುಣವನಱಿಸಿದರುಂಟೇ ॥೫೦೬॥

ಹಿತರುಂ ಪರಹಿತರುಂ ಪಂ ॥
ಡಿತರುಮೆನಿಸ್ಪವರ ಮಾತುಮಂ ಕೇಳದ ದು ।
ರ್ಮತಿಯುಪ್ಪಂಗವಶ್ಯಂ ।
ಸತತಂ ಕೇಡಾಗದಿಹುದೆ ಸುಗುಣಕರಂಡಾ ॥೫೦೭॥

ಗುಣವಂತನಾಗಿ ಬಾಳ್ವುದು ।
ಹಣವೆಱದಡೆ ಗುಣವನೆಱಯಲಾಗದು ಪುರುಷಂ ॥
ಗುಣವೊಂದಕೞುವರಲ್ಲದೆ ।
ಹಣಕೞುವರೆ ಕೞದ ಬಳಿಕ ಚೂಡಾರತ್ನಾ ॥ ॥೫೦೮॥

ಮನದೊಳಗನ್ಯರಿಗಹಿತವ ।
ನೆನೆದರೆ ತಾಂ ಮುನ್ನ ಕೆಡುವ ತನಿಗಚ್ಚಿದ್ದಾ ॥
ಮನೆ ಮುನ್ನ ಬೆಂದು ಮಿಕ್ಕಿನ ।
ಮನೆಯಂ ಸುಡುವಂತೆ ಕಡೆಗೆ ಸುಜನೋತ್ತಂಸಾ ॥೫೦೯॥

ಎಲ್ಲಾ ಕಲೆಗಳ್ ತಂತ ।
ಮ್ಮಲ್ಲಿ ಸಮರ್ಥಂಗಳಪ್ಪುವಲ್ಲದೆ ಮತ್ತಾ ॥
ಹೊಲ್ಲೆನಿಸಿಕೊಂಡು ತಾಂ ಸೊಗ ।
ಸಿಲ್ಲೆನಿಸಿಯೆಕೊಂಬುವಿಲ್ಲ ಚೂಡಾರತ್ನಾ ॥೫೧೦॥

ಬೇಸತ್ತು ನಾಡು ಕೆಟ್ಟೊಡೆ ।
ದೇಶವನಾಳ್ವರಸು ಕೆಡುಗುಮರಸಿನ ಕತದಿಂ ॥
ದೇಶವು ಕೆಡುಗುಮದೆಂತನೆ ।
ತ್ರಾಸಿನ ತೊಡೆಯೊಂದು ಬಿದರ್ದೊಡೊಂದುೞಿವುದೇ ॥೫೧೧॥

ದೊರೆ ಕೆಡದೆ ರಾಜ್ಯವೆೞಿಯದ ।
ಪರಿವಾರಂ ತೊೞಿಯದರ್ಥ ಸವೆಯದ ಪಾಪಂ ।
ತಿರುಗದೆ ಭೂಪನ ಚಿತ್ತಂ ।
ಕೊರಗದೆ ನಡೆವವನೆ ಮಂತ್ರಿ ಚೂಡಾರತ್ನಾ ॥೫೧೨॥

---

## ಹೊನ್ನಮ್ಮ.

ಕ್ರಿಸ್ತಶಕೆ ೧೬೭೨–೧೭೦೪ರ ವರೆಗೂ ಆಳಿದ ಪ್ರಸಿದ್ಧರಾದ ಚಿಕ್ಕದೇವರಾಜ ವೊಡೆಯರೆಂಬ ಮೈಸೂರು ಮಹಾರಾಜರ ಕಾಲದಲ್ಲಿ ಹೊನ್ನಮ್ಮನೆಂಬವಳು ಕನ್ನಡದಲ್ಲಿ ಶ್ಲಾಘ್ಯವಾದ 'ಹದಿಬದೆಯ ಧರ್ಮ' (ಪತಿವ್ರತಾಧರ್ಮ ಎಂಬ ಗ್ರಂಥವನ್ನು ಬರೆದು ಹೆಸರುಗೊಂಡಿರುವಳು.

ಕುತ್ತವಣಿಸಿಕೋಪಗೊಳದೆ ಕೂತಿರ್ಪರೆಮ್ಮ । ತತ್ತಿಗರಂದೆರ್ಡೆಗೊಳಿಸಿ ॥
ಅತ್ತಿಗೆನಾದಿನಿಯರೊಳಂತರಂಗವ । ಪತ್ತುಗೆಗೊಳಿಸ ಬಾಳುವುದು ॥
ತಂದೆತಾಯನು ಬಿಟ್ಟು ತಮ್ಮ ಕೈಗೆಡೆಯಾಗಿ । ಬಂದ ಸೊಸೆಯರ ಬಾ
[ಧಿಸದೆ ॥
ಅಂದಂದಿಗುಡಿಗೆತೊಡಿಗೆಯೂಟಪಾಡಗ । ಳಿಂದ ಸಂತಸಗೊಳಿಸುವುದು ॥

ಬಸವಳಿಸದೆ ಪಳಿಯದೆ ಭಂಗಪಡಿಸದೆ । ಹಸಗೆಡಿಸದೆ ಹದುಗಿಸದೆ ॥
ಬಸಿಱೊಳು ಬಂದ ಪೆಣ್ಮಕ್ಕಳ ಮಱುಕವ । ಸೊಸೆಯರೆಡೆಯೊಳಿಸಗು
[ವುದು ॥೩೧೯॥

ಬಸಱೊ ಸಿಟ್ಟಿಸಿಯುಣಬಡಿಸುವುದೊಳ್ಳುಮುಂತಿ । ಯೊಸಕವಱಿತು ಮಿಸಿ
[ಸುವುದು ॥
ಬಸೆದುಸಿಂಗರಿಸುವುದೊಲಿದು ನೋಡುವುದಿಂತು । ಸೊಸೆಯರ ಸೊಗಬಡಿ
[ಸುವುದು ॥೩೨೦॥

ಬುದ್ಧಿಗಲಿಯಲಱಿಯದ ಪಸುಮಕ್ಕಳ । ಮುದ್ದಿಸಿ ಮುದವಿಡುವುದು ॥
ಬುದ್ಧಿಗಲಿಪ ಕಾಲದೊಳು ಪೊಯ್ದು ಬೈದುನ । ವೃದ್ಧಿಗಳನೆ ಬೋಧಿಸು
[ವುದು ॥೩೨೧॥

ಓದುಗಲಿವ ಮಕ್ಕಳಿಗೂಟಪಾಡವ । ನಾದರದಿಂದನುಗೊಳಿಸಿ ॥
ಓದಿಸುವುದು ಕೊಂಡು ಬೈದೊಡಮವರನು । ಮೂದಲಿಸದೆ ಸಮ್ಮತಿ
[ಪುದು ॥೩೨೨॥

ಬಸಿಱಿಯ ಬಾಣಂತಿಯ ಜೀನವಡೆವರ । ಪಸುಮಕ್ಕಳ ಪಯಸುಗಳ ॥
ಬಸವಳಿಸದೆ ಬಳಲಿಸದೆ ಬಯ್ಯದೆ ಬಗೆ । ಯೊಸಮುಚಿತದೊಳೀವು
[ವುದು ॥೩೨೩॥

೫ನೆಯ ಸಂಧಿ.

ಪೆಣ್ಣಲ್ಲವ ತಮ್ಮನೆಲ್ಲ ಪಡೆವ ತಾಯಿ । ಪೆಣ್ಣಲ್ಲವೆ ಪೊರೆದವಳು ॥
ಪೆಣ್ಣು ಪೆಣ್ಣೆಂದೇತಕ ಬೀಳುಗಳವರು । ಕಣ್ಣುಕಾಣದ ಗಾವಿಲರು ॥
ಕಾವನಾದೊಡೆ ಬಂದ ಗುಣವೇನದಱಿಂದ । ಕಾವೆರಿಯಾದೊಡೆ ಕು
[ಂದೇನು ॥
ಇವರಿರ್ವರೊಳೊಳ್ಪಱಿಗಪಡೆದವರೆಂದ । ಸಮನಿಸುದಿದಪರಸೌಖ್ಯ ॥೩೨೪॥

ಸುಗುಣನಾವನು ಸುಚರಿತ್ರನಾವನು ಕಣ್ಗೆ । ಸೊಗಸುವ ಸೊಬಗನಾ
[ರೆಂದು ॥
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ । ಳೊಗೆದೊಳಗುವರಸಿಗೊ
[ಲಿದು ॥೩೭॥

ಅಲೆಗೆಯ್ಯದವಮತಿಯೆಸಗದ ವೈರವ । ಬಲಿಸದ ಬಱಿದೆ ಪೞಿಯದ ॥
ಕೊಲೆಬೈಗುಳಿಂದೆ ಕೋಟಲೆಗೊಳಿಸದ ಸ । ತ್ಕುಲಕೀವುದು ಕುವರಿ
[ಯನು ॥೩೮॥

ಪಣದಾಸೆ ನಂಟುತನದ ಪತ್ತುಗೆ ನೇಹ । ದೆಣಿಕೆಗಳಿಂದೆದೆಗರಗಿ ॥
ಗುಣಜೌವನಕುಲರೂಪುಗುಂದಿದ ನಡೆ । ವೆಣಕೀಯಲಾಗದು ಪೆಣ್ಣ ॥
ಜಡನಿಗೆ ಜಾತಿಹೀನನಿಗೆ ಚಂಚಲನಿಗೆ । ಕಡುಮೂರ್ಖನಿಗೆ ಗಾವ್ಪಸಿಗೆ ॥
ಬಡತನದೊಳು ಬಲುಬವಣೆಗೊಂಬವನಿಗೆ । ಕೊಡಲಾಗದು ಕುವರಿ
[ಯನು ॥೩೯॥

ಮುಂದಿವಾಳದೊಳಣ್ಣನ ಮೇಗಣ ದೂರ । ತಂದತನ್ನಣುಗಿಯನೊಡನೆ ॥
ಹಿಂದುಮುಂದೆಣಿಸದೆ ಹೀಯಾಳಿಸಿ ಮಿಗೆ । ಸಿಂದಿಸಿ ಸೀಕರಿಸುವುದು ॥
ಅವಿವೇಕದೊಳು ತನ್ನಣ್ಣನ ನುಡಿಗೇಳ । ದವಮತಿಗಳನಾಚರಿಪ ॥
ಕುವರಿಗೆ ಸಲಿಗೆಯ ಕೊಟ್ಟು ಕೊಬ್ಬಿಪ ತವ । ರವರೈಸೆ ಪೆಣ್ಣಾಗದ
[ವರು ॥೪೦॥

ಮುಳಿವ ಮೋಡಿಯೊಳಿರ್ಪ ಮೊನೆವಾತಾಡುವ । ಪೞಿವ ಪಲವು ಪಾಡು
[ಗಳಿಗೆ ॥
ಅೞಲುವ ಮನವನಡಗಿಸಿಯಣುಗಿಗಾಗಿ । ಯಳಿಯನಿಗಳುಕಿ ನಡೆವುದು ॥
ಪೆತ್ತ ಪೆಣ್ಮಗಳ ಪೆರ್ಚಿಸಿ ಮೈಮಱೆದು । ನ್ಮತ್ತೆಯಪ್ಪಂತೆ ಮನ್ನಿಸದೆ ॥
ಸುತ್ತುಗೆಲಸವ ಕಲಿಸಿ ಗೈಸುವುದೊಡ । ನೊತ್ತಿ ನುಡಿವುದುಚಿತವನು ।
ಎಂತು ನಡೆದೊಡಸಿಯಸಿಗಿಂಬು ದೋಱುವು । ದೆಂತುನಡೆದೊಡೇಳ್ಗೆಯ
ಹುದು ॥
ಎಂತು ನಡೆದೊಡೆಲ್ಲರುಮಿದು ಲೇಸೆಂಬ । ರಂತುಟೆಲ್ಲವ ಕಲಿಸುವುದು ॥

## ೬ನೆಯ ಸಂಧಿ.

ಎರವೆಳ್ಳನಿತ್ತಿಲ್ಲದೊರ್ವರೊರ್ವರೊಳೊಡ । ವೆರೆದಿರ್ಪ ಸತಿಪತಿಗಳಿಗೆ ॥
ದೊರೆಕೊಂಬುದು ಸಂಸಾರಸುಖದ ಸುಗ್ಗಿ । ಪರದೊಳಾನಂದ ಪರ್ಬ
[ವುದು ॥೫೩೫॥

ತೋಟಿಗೊಳುವ ದುಷ್ಟದಂಪತಿಗಳು ಬೊ । ತಾಟಗಳಿಂದನುಗೆಟ್ಟು ॥
ಊಟಸಿದ್ಧಿಗಳೊಂದಱೊಳು ಸುಖವಿಲ್ಲದೆ । ಕೋಟಲೆಗೊಂಡು ಕೂಗು
[ವರು ॥೫೩೬॥

ದಂಪತಿಗಳ ಪಗೆತನದಿಂದಿರ್ವರ ಪೆಂಪಿನ ಪೇರು ಪಾೞಪ್ಪುದು ॥
ಸೊಂಪುಗೆಡುವುದು ಸೊಬಗು ಸಂಸಾರದ । ಜಂಪು ಸಡಿಲಿ ಜಾಱುವುದು ॥
ಮನದೊಳು ಮನ ನೆನಹಿನೊಳು ನೆನಹು ಮತ್ತ । ತನು ತನುವಿನೊ
[ಳೊಡವೆರಸಿ ॥
ಅನುಗೊಳ್ ಪಾಲುನೀರುಗಳಂತಿನಿಯನು । ಮಿನಿಯಳುಮೇಕವೆನಿಪ್ಪುದು ॥

## ೭ನೆಯ ಸಂಧಿ.

ಆರೈದು ತನ್ನಿನಿಯನ ಸಿರಿ ಬಡತನ । ವೀರೀತಿಯೆಂದೆದೆಗೊಳಿಸಿ ॥
ಬಾರದ ವಸ್ತುವ ಬಯಸಿ ಬಾಧಿಸದೆ ಕೈ । ಸಾರಿದುದಕೆ ಸಮ್ಮತಿಪುದು ॥
ಪಳದಾಗದ ಮುನ್ನ ಬಣ್ಣಗೆಡದ ಮುನ್ನ । ಪೊಳದೋರಿ ಮುಗ್ಗದ ಮುನ್ನ ॥
ಕಳೆಯುಱಿಯದ ಮುನ್ನ ಕಂದಿ ಕುಂದದ ಮುನ್ನ । ಬಳಸುವುದಖಿಳವಸ್ತು
[ವನು ॥೫೪೦॥

ಕೊಳೆತ ಕಂದಿದಯಿಲಿ ತಿಂದುಳಿಸಿದ ವಿನಾಸ । ಲಱಿವಲ್ಲದವರು ತಂದಿತ್ತ ॥
ಪುೞಿತ ಪೊಲ್ಲದ ನೆಲದೊಳು ಪುಟ್ಟಿದ ಶಾಕಂ । ಗಳನು ಕಳೆದು ಬಿಸುಡು
[ವುದು ॥೫೪೧॥

ಸಲೆ ಚಿನ್ನ ಬೆಳ್ಳಿ ಹಿತ್ತಾಳೆ ಕಂಚು ತಾಮ್ರದ । ಪಲವಗೆ ಪಾತ್ರಂಗಳನು ॥
ಕಿಲುಬಿನಕಱೆ ತೋಱದಂತಾದರದಿಂ । ದಲಸದೆ ತೊಳೆವುದಂದಂದು ॥
ತೊಂಡುವಣ್ಗಳ ನೇಹದೊಡಕಿಗೆ ಸಿಲುಕದ । ಬೆಂಡೆವಣ್ಗಳ ಲಾಲಿಸದೆ ॥
ಪುಂಡವಣ್ಗಳೊಳು ಪೊರ್ದುಗೆವಡೆಯದೆ ನ । ಲ್ವಂಡರೊಡನೆ ಬೆರಸು
ವುದು ॥೫೪೨॥

## ರಾಜಶೇಖರ ವಿಲಾಸ.

ಕನ್ನಡವಿದ್ಯಾರ್ಥಿಗಳಿಗೆಲ್ಲಾ ಪ್ರಸಿದ್ಧವಾದ ಈ ರಾಜಶೇಖರವಿಲಾಸವನ್ನು ಬರೆದ ಕವಿಯು ಷಡಕ್ಷರಿದೇವನು. ಈತನು ಎಳಂದೂರಿನಲ್ಲಿ ಜನಿಸಿ, ದನುಗೂರುಮಠಕ್ಕೆ ಸೇರಿದ ಚಿಕ್ಕವೀರನೆಂಬ ಶಿವಾಚಾರದ ಗುರುವಿಗೆ ಶಿಷ್ಯನಾಗಿ ವಿದ್ಯಾಭ್ಯಾಸಮಾಡಿ ವಿಶೇಷವಾಗಿ ಹೆಸರುಗೊಂಡಿದ್ದನು. ಈತನು ಬೀದರದಲ್ಲಿದ್ದ ವಿರಕ್ತಮಠಕ್ಕೆ ಅಧ್ಯಕ್ಷನ ಗದ್ದುಗೆಗೊಂಡು ಲಿಂಗವಂತದೊರೆಗಳ ಆಶ್ರಯವನ್ನು ಸಂಪಾದಿಸಿ ಗ್ರಂಥಗಳನ್ನು ಬರೆದನು. ರಾಜಶೇಖರವಿಲಾಸ, ವೃಷಭೇಂದ್ರವಿಜಯ, ಶಬರಶಂಕರವಿಲಾಸ—ಇವೇ ಈತನ ಮುಖ್ಯವಾದ ಕನ್ನಡ ಗ್ರಂಥಗಳು. ಇವು ಗದ್ಯಪದ್ಯ ಮಿಶ್ರವಾದ ಚಂಪೂ ಗ್ರಂಥಗಳು. ಈತನು ಸಂಸ್ಕೃತದಲ್ಲಿಯೂ ಪ್ರವೀಣನಾಗಿದ್ದ ಕಾರಣ ಕವಿಕರ್ಣರಸಾಯನ, ಭಕ್ತಾಧಿಕ್ಯ, ಶಿವಾಧಿಕ್ಯ ಎಂಬ ಮೂರು ಗ್ರಂಥಗಳನ್ನು ಆ ಭಾಷೆಯಲ್ಲಿ ಬರೆದಿದ್ದಾನೆ: ಆದಕಾರಣ 'ಉಭಯಕವಿತಾವಿಶಾರದ' (ಎರಡು ಭಾಷೆಯ ಕವಿತ್ವದಲ್ಲಿಯೂ ಬುದ್ಧಿವಂತನು) ಎಂಬ ಬಿರುದು ಈತನಿಗೆ ಚೆನ್ನಾಗಿ ಸಲ್ಲುವುದು. ವಿಶೇಷವಾಗಿ ಸಂಸ್ಕೃತಪದಗಳು ಈತನ ಕನ್ನಡ ಗ್ರಂಥದಲ್ಲಿ ಪ್ರಯೋಗಿಸಲ್ಪಟ್ಟಿದ್ದರೂ ರಸಭರಿತವಾಗಿಯೂ ಕಿವಿಗಿಂಪಾಗಿಯೂ ಇರುವ ಪದ್ಯಗಳು ಅನೇಕವಾಗಿವೆ. ಈತನ ರಾಜಶೇಖರವು ಪ್ರಮಾಣಗ್ರಂಥವೆಂದು ಎಲ್ಲರೂ ಒಪ್ಪುವರು. ಈತನ ಗ್ರಂಥಗಳಿಂದ ಕೆಲವು ಭಾಗವನ್ನು ಉದ್ಧರಿಸಿ ಇಲ್ಲಿ ಬರೆದಿವೆ.

---

ಲಲಿತರಗಳೆ.

### ರಾಜಶೇಖರವಿಲಾಸ.

39 ಪುಷ್ಪಾವಚಯಂ.

ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ ।
ಎಳೆಯಸುಗಂಧದಲ್ಲಿ ಜಲರುಹಾಕರದಲ್ಲಿ ॥
ಸಂಪಗೆಯ ತರುಗಳೊಳ್ ಸೊಂಪಿಡಿದ ಸುರಯಿಯೊಳ್ ।
ಪಾದರಿಯ ಬನದಲ್ಲಿ ಪನಸಫಲಯುತದಲ್ಲಿ ॥೫೪೪॥

ತವೆ ಬಹುವಿಚಿತ್ರತರಮಾಲಿಕೆಗಳಂ ಸವೆದು ।
ಸೂಸುತುಂ ಬೀಸುತುಂ ನಳಿತೋಳನಳಿಚಾಳ ॥
ಮೆಳಸಿಬರೆ ಬಳಸಿ ನೆಱೆಪಾವರಿಸಿ ಗಾವರಿಸೆ ।
ಕರದಿಂದಮುರವಿಂದದರಲಿಂದೆ ಭರದಿಂದೆ ॥೫೫೨॥

ಪೊಡೆಯುತುಂ ನಡೆಯುತುಂ ಬಳ್ಕುತುಂ ತುಳ್ಕುತುಂ ।
ಕಣ್ಬೆಳಗ ತಣ್ಬೆಳಗನೈತಂದು ಸೈತಂದು ॥
ಭೂಪತಿಗೆ ಕೈಮುಗಿದು ಪೂಪುಟ್ಟಿಯಂ ತೆಗೆದು ।
ಕರತಲಕೆ ನೀಡಿದರ್ ಹರುಷದಿಂ ನೋಡಿದರ್ ॥೫೫೩॥

---

## ಕಬ್ಬಿಗರ ಕಾವ.

ಈ ಗ್ರನ್ಥಕರ್ತೃವಿಗೆ ಆಣ್ಡಯ್ಯನೆಂದು ಹೆಸರು. ಈತನು ಜೈನಮತದವನು. ಈತನು ಸುಮಾರು ೧೩ನೆಯ ಶತಮಾನದಲ್ಲಿ ಜೀವನ್ತನಾಗಿದ್ದಿರಬಹುದೆಂದೂ ಕರ್ಣಾಟಕ ದೇಶವರ್ಣನೆಯನ್ನು ಗ್ರನ್ಥದಲ್ಲಿ ಮಾಡಿರುವುದರಿಂದ ಈ ದೇಶದವನೆಂದೂ ಹೇಳುವರು. ಸಂಸ್ಕೃತದ 'ಸಹಾಯವಿಲ್ಲದೆ ಕನ್ನಡದಲ್ಲಿ ಹೃದ್ಯವಾದ ಕಾವ್ಯವನ್ನು ಬರೆಯಲಾಗದು; ಆದಕಾರಣ ಪಂಪ, ನಾಗವರ್ಮ ಮುಂತಾದ ಕವಿಗಳು ಮಿಶ್ರಭಾಷೆಯಲ್ಲಿ ಬರೆದಿದ್ದಾರೆ' ಎಂದು ಹೇಳುವ ಅಪವಾದವನ್ನು ಹೋಗಲಾಡಿಸುವುದಕ್ಕೋಸ್ಕರ ಈ ಕವಿಯು ತಕ್ಕುದಾದ ಒಳ್ಳೆಯ ಗ್ರನ್ಥವನ್ನು ರಚಿಸುವಂತೆ ವಿದ್ವಾಂಸರೂ ಹಿರಿಯರೂ ಕೇಳಿಕೊಂಡಮೇರೆಗೆ ಈ ಆಂಡೈಯನು ಸಂಸ್ಕೃತ ಪದಗಳ ಸಹಾಯವಿಲ್ಲದೆಯೇ ಕಬ್ಬಿಗರ ಕಾವವನ್ನು ಬರೆದನಂತೆ. ಈ ಗ್ರಂಥವನ್ನು ಮದನವಿಜಯ, ಸೊಬಗಿನ ಸುಗ್ಗಿ, ಈ ಹೆಸರುಗಳಿಂದಲೂ ಕರೆವುದುಂಟು. ಇದರಲ್ಲಿ ಕಥಾನಾಯಕನಾದ ಮನ್ಮಥನ ಜೈತ್ರಯಾತ್ರೆಯನ್ನು ಹೇಳುವುದರಿಂದ ಇದನ್ನು 'ಮದನವಿಜಯ'ವೆಂದೂ, ರಸಭರಿತವಾಗಿಯೂ ಕಿವಿಗಿಂಪಾಗಿಯೂ ಸಂಸ್ಕೃತಪದದ ಗಂಧವಿಲ್ಲದೆಯೂ ರಚಿಸಲ್ಪಟ್ಟಿರುವ ಈ ಗ್ರನ್ಥದಿಂದ ಕನ್ನಡ ಕವಿಗಳ ಮೇಲಣ ಅಪವಾದವು ಹೋದಕಾರಣ, 'ಕಬ್ಬಿಗರ ಕಾವ' ಎಂದರೆ

‘ಕವಿಗಳ ರಕ್ಷಕ’ ವೆಂದೂ, ಇದು ಕವಿಗಳಲ್ಲಿ ಹೆಸರುಗೊಂಡು ಬಹು ರಮ್ಯವಾಗಿಯೂ ಹೃದ್ಯವಾಗಿಯೂ ಇರುವ ಕಾರಣ ‘ಸೊಬಗಿನ ಸುಗ್ಗಿ’ ಯೆಂದೂ ಕರೆಯುವುದು ನ್ಯಾಯವೇ ಸರಿ.

ಉತ್ಸಾಹರಗಳೆಯಲ್ಲಿ ಬರೆದಿರುವ ಕೆಲವು ಪದ್ಯಗಳು ಮಾದರಿಗಾಗಿ ಇದರಿಂದ ತೆಗೆದು ಇಲ್ಲಿ ಮುದ್ರಿಸಿದೆ.

---

## ಉತ್ಸಾಹರಗಳೆ.

### 40. ವಸಂತಋತುವರ್ಣನೆ.

ಬಿಳಿಯನನೆಯು ಕಣೆಗೆ ನಾಡೆ ।
ಪಗೆವರೊಡಲು ಸುಗಿಯೆ ಕೂಡೆ ॥
ನೆಲನನೊಂದೆ ಕೊಡೆಯಿನಾಳ್ದು ।
ಮಿಸುಪ ಜಸವು ನಿಮಿರೆ ಕೇಳ್ದು ॥೫೫೪॥

ಕುಳಿರ್ವ ಪೂಗೊಳಂಗಳಲ್ಲಿ ।
ತಳಿರ ಕಾವಣಂಗಳಲ್ಲಿ ॥
ಪಳುಕುವೆಸದ ಜಟ್ಟದಲ್ಲಿ ।
ಪರಿವ ತೊಱೆಯ ತಡಿಗಳಲ್ಲಿ ॥೫೫೫॥

ತುಂಬಿವಿಂಡಿನಂತೆ ಪಾಡಿ ।
ಜಕ್ಕವಕ್ಕಿಯಂತೆ ಕೂಡಿ ॥
ದೆಸೆಯನಿಚ್ಛೆಯಿಂದೆ ನೋಡಿ ।
ಸೊಗಯಿಪಂಚೆಯಂತಿರಾಡಿ ॥೫೫೬॥

ಪೊಳೆವ ತಳಿರ ನನೆಯ ಮೊನೆಯ ।
ತುಱುಗಿದಲರ ಬಳಸುವಲರ ॥
ಮುಳಿರ್ವ ಮಿಡಿಯ ಗಿಳಿಯ ನುಡಿಯ ।
ಪರಿವ ಕಾಲ ಕರ್ವುಗೋಲ ॥೫೫೭॥

ಚೆಲ್ವನಾಂತು ತೋರ್ಪ ಬನದ ।
ನಡುವೆ ತನ್ನದೊಂದು ಬಿಸವ !
ಮಮರೆ ಮಿಱುಪ ಬಟ್ಟದಲೆಯು ।
ಸೊಬಗು ರೂಡಿನೆಡೆವ ನೆಲೆಯು ||೩೩೮||

ಚೆನ್ನೆಯರ್ಕಳೊಡನೆ ಕೂಡಿ ।
ಮುಗುಳ ಸರಮನವರೆ ಸೂಡಿ ॥
ನಲ್ಲಳೊಡನೆ ಕೂರ್ಮೆಯಿಂದೆ ।
ಕಾನನೊಡನೆ ಪೆರ್ಮೆಯಿಂದೆ ||೩೩೯||

ಮಾವಿನಡಿಯೊಳಾಡುತುಂ ।
ಪಾಡನೆಯ್ದೆ ಕೇಳುತುಂ ॥
ಪ್ರೊಷ್ಟ್ರ ನಿಂತು ಕಳೆಯುತುಂ ।
ತೊಲಗದಿರ್ದನೆಸೆಯುತುಂ॥ ||೩೪೦||

ಪ್ರಥಮಭಾಗಂ ಸಮಾಪ್ತಂ.



# ಪದ್ಯಸಾರದ ಟಿಪ್ಪಣಿ.

---

## ಅಯೋಧ್ಯಾಪುರವರ್ಣನೆ.

1. ರನ್ನ = ರತ್ನ. ಚೆನ್ನು + ಎಸೆವ = ಸೌಂದರ್ಯದಿಂದ + ಒಪ್ಪುವ. ಮುತ್ತುವಜ್ರ—ಅರಿಸಮಾಸ: ಮುತ್ತುಬಜ್ಜರ ಎನ್ನಬೇಕು. ತೆನೆ = ಪೌಳಿಗೋಡೆಯ ತುದಿಯಲ್ಲಿ ಚಕ್ರಾಕಾರವಾಗಿರುವ ಭಾಗ ; ಅರ್ಥಾಂತರ—ಧಾನ್ಯಗಳ ತೆನೆ, ಹಸು ಮೊದಲಾದುವುಗಳ ಗರ್ಭ. ಈಪದ್ಯದಲ್ಲಿರುವ ತೃತೀಯಾಂತ ಪದಗಳೆಲ್ಲಾ 5ನೆಯ ಪದ್ಯದಲ್ಲಿರುವ 'ಅತಿ ಚಿತ್ರವಾದ ಎಂಬ ಪದದಲ್ಲಿ ಅನ್ವಯಿಸುತ್ತವೆ.

2. ಅಳವಟ್ಟ = ಅಳತೆಗೆ ಸರಿಯಾದ, ಅಚ್ಚುಕಟ್ಟಾದ, ಅಂದವಾದ. ಪವಳ = ಹವಳ. ಮಾಣಿಕದ = ಮಾಣಿಕ್ಯವೆಂಬ ರತ್ನದಿಂದ ಕೂಡಿದ.

3. ಬಂಧುರದ = ಸೊಗಸಾದ. ಚನ್ದ್ರಶಾಲೆ = ಮೇಲುಮಾಳಿಗೆಯ ಮೇಲೆ ಕಟ್ಟಿದ ಕೊಟಡಿ. ಪಙ್ಕ್ತಿ = ಸಾಲು ತದ್ಭವ—ಪಂತಿ.

4. ಮುಗಿಲು = ಮೇಘ; ಅರ್ಥಾಂತರ—ಅಂತರಿಕ್ಷ. ಡೆಂಕಣಿ = ಧ್ವಜ, ಬಾವುಟ. ಮಿಗೆ = ಹೆಚ್ಚಾಗಿ. ಮೆರೆವ = ಪ್ರಕಾಶಿಸುವ. ಅರ್ಥಾಂತರ—ಬೀದಿಯಲ್ಲಿ ತಿರುಗುವ, ಭಾವರೂಪ—ಮೆರವಣಿಗೆ. ಕರಿತುರಗಕಾಲಾಳ್ಗಳು = ಆವಸಮಾಸ ? ಕರಿ = ಕರವುಳ್ಳುದು, ಆನೆ ; ತುರಗ = ಕುದುರೆ.

5. ಅತಿಚಿತ್ರವಾದ = ಬಲುಸೊಗಸಾದ, ಸಾಕೇತನಗರ = ಅಯೋಧ್ಯಾಪಟ್ಟಣ. ಕ್ಷಿತಿನಾಥ = ನೆಲಕ್ಕೆ ಒಡೆಯ. ದಶರಥ = ಶ್ರೀರಾಮನ ತಂದೆ. ಪೊರೆ = ರಕ್ಷಿಸು.

## 2. ಮಾಡತಕ್ಕ ಕೆಲಸಗಳು.

6. ಹಸಿದು—ಭಾವರೂಪ—ಹಸಿವು. ಬಂದವರಿಂಗೆ = ಬಂದವರಿಗೆ. ಅಶನವ = ಆಹಾರವನ್ನು. ಈಯಬೇಕು = ಕೊಡಬೇಕು ; ಧಾ—ಈ. ಶಿಶುಗಳು = ಮಕ್ಕಳು. ಪಾಲ್ಪೆಣ್ಣೆ ಹಾಲು ಬೆಣ್ಣೆ ನಡಿಸಬೇಕು = ಕೊಡುತ್ತ ಬರಬೇಕು.

7. ಬೆರಸು = ಕೂಡು ; ಭಾವರೂಪ—ಬೆರಕೆ. ಭಾಷೆಕೊಡು = ಮಾತುಕೊಡು, ಪ್ರತಿಜ್ಞೆಮಾಡು. ನಿಜ = ಸತ್ಯ.

8. ಒಡಲ = ದೇಹವನ್ನು, ಪ್ರಾಣವನ್ನು. ಪಾತಕವನು = ಪಾಪವನ್ನು. ಉಜ್ಜಿ = ಹೆಚ್ಚಾಗಿ. ಗಳಿಸು = ಸಂಪಾದಿಸು, ಪಡೆ.

9. ಕುತ್ಸಿತ = ನಿಂದೆ, ಅಲ್ಪತನ. ಹೆಮ್ಮೆ = ಅಹಂಕಾರ, ಗರ್ವ.

10. ಹಿರಿಯತನ = ಗೌರವ. ಧಿಕ್ಕರಿಸಬೇಡ = ಬಬ್ಬರನ್ನೂ ಹೀಯಾಳಿಸಬೇಡ. ಸಿರಿ = ಸಂಪತ್ತು ; ತ್ಸ—ಶ್ರೀ. ಮೆರೆ—ಅಹಂಕಾರದಿಂದ ಹಿಗ್ಗು, ಬೆರೆ.

## 3. ಹನುಮಂತನು ಚೂಡಾಮಣಿವನ್ನು ಕೊಟ್ಟದು.

ಚೂಡಕ = ಬೈತಲೆಯ ಮಣಿ.

11. ತರಣಿ + ವಂಶ + ಜ = ಸೂರ್ಯನ + ಕುಲದಲ್ಲಿ + ಹುಟ್ಟಿದ. ತರಣಿ—ಅರ್ಥಾಂತರ—ತೆಪ್ಪ. ವಂಶ—ಅರ್ಥಾಂತರ—ಬಿದಿರು. ಮರುಳ = ಕೆಟ್ಟವನಾದ. ಒಯ್ಯೆ = ಹೊತ್ತುಕೊಂಡು ಹೋಗಲು ; ಧಾ—ಉಯ್. ಲೋಕಮಾತೆಯನು—ಇದು ಸೀತೆಯನು ಎಂಬುದರ ವಿಶೇಷಣ.

12. ಭೂಮಿ + ಜೆಯನು = ನೆಲದಲ್ಲಿ ಹುಟ್ಟಿದ ಸೀತೆಯನ್ನು. ಅರಸಲ್ಕೆ = ಹುಡುಕುವುದಕ್ಕಾಗಿ. ಪೋಪ = ಹೋಗುವ. ಭರದೊಳಗೆ = ಆತುರದಿಂದ.

13. ಜಲ + ಧಿ = ಸಮುದ್ರ ; ಅವೇಗುವಾರ್ಥವೇನು ? ಐತಂದು = ಬಂದು ; ಬಲುಗೈಯ = ಪರಾಕ್ರಮಶಾಲಿಯಾದ, ಅಥವಾ ಹಲವು ಕೈಗಳುಳ್ಳ. ದಶಮುಖನ = ಹತ್ತುಮುಖಗಳುಳ್ಳ ರಾವಣನ. ಪೊಳಲು = ಪಟ್ಟಣ, (ಲಂಕೆ).

**14.** ಜಲ+ಜ+ಮಿತ್ರ=ನೀರಿನಲ್ಲಿ ಹುಟ್ಟಿದ ಕಮಲಗಳ ಸ್ನೇಹಿತನಾದ ಸೂರ್ಯ ; ಇದು ಹೇಗೆ ? ಕಡಲ=ಸಮುದ್ರದ ; ಪ್ರಕೃತಿ—ಕಡಲು. ಸಾರ್ದ=ಸೇರಿದ ; ಧಾ—ಸಾರ್. ಹೊಳಲನೆಲ್ಲವ=ಪಟ್ಟಣದ ಎಲ್ಲಾ ಕಡೆಗಳಲ್ಲಿಯೂ ; ಸಪ್ತಮ್ಯರ್ಥದಲ್ಲಿ ದ್ವಿತೀಯೆ. ಕಾಣದೆಯೆ=ಸ್ವಲ್ಪಮಾತ್ರವೂ ಕಾಣದೆ.

**15.** ಸುಳಿವು—ಧಾ.—ಸುಳಿ. ಮನದಿ=ಮನಸ್ಸಿನಲ್ಲಿ.

**16.** ಚೋರ=ಕಳ್ಳ ; ಹೇಗೆ ಚೋರನಾದನು ? ದಶಕಂಠ=ಹತ್ತು ಕೊರಳುಳ್ಳವನು ; ಯಾರು ? ಪುರವನು=ಪಟ್ಟಣವನ್ನು. ಎಳೆದೊಯ್ದು=ಎಳೆದುಕೊಂಡು ಹೋಗಿ ; ಇಲ್ಲಿ—ಎತ್ತಿಕೊಂಡು ಹೋಗಿ. ರಘುಪಂಗೆ=ರಾಮನಿಗೆ. ಕೈಮೊಯ್ದು=ಕೈಯನ್ನು ಹೊಡೆದು, ಪ್ರತಿಜ್ಞೆಮಾಡಿ.

**17.** ಕೇರಿ=ಬೀದಿ ; ಅರ್ಥಾಂತರ—'ಕೇರು' ಧಾತುವಿನ ಭೂತನ್ಯೂನ. ಈರೈದು ಶಿರದವನು=ಎರಡೈದು ತಲೆಯವನು ; ಯಾರು ? ಈಯರ್ಥದ ಸಂಸ್ಕೃತಪದಗಳಾವುವು ಬಂದಿವೆ ? ನಡೆತಂದು=ಬಂದು.

**18.** ಅಸುರಸನುಜ=ರಾಕ್ಷಸನ ತಮ್ಮ, ಕುಂಭಕರ್ಣ. ಸುಯ್ಲ=ಉಸಿರು. ಪುಸಿದು=ನುಗ್ಗಿ. ಹಾರೆದೆಯುಳ್ಳಿ=ಹಾರುವ ಎದೆಯುಳ್ಳಿ, ಭಯದಿಂದ ಗುಂಡಿಗೆ ಬಡಿದುಕೊಳ್ಳುತ್ತಿರುವಲ್ಲಿ. ದೆಸೆಗೆ=ದಿಕ್ಕಿಗೆ, ದೂರಕ್ಕೆ. ಘುಮ್ಮಿಕ್ಕೆ=ಘುಮಿಕಿ.

**19.** ಕುಸುಮನಾಭನ ಭಕ್ತ=ಹೊಕ್ಕುಳಲ್ಲಿ ಹೂವುಳ್ಳವನ, ವಿಷ್ಣುವಿನ, ಇಲ್ಲಿ—ವಿಷ್ಣುವಿನ ಅವತಾರವಾದ ರಾಮನ. ಭಕ್ತ=ಸೇವಕನು ವಿಭೀಷಣನು. ಉಸಿರೆ=ಹೇಳಲು. ಬಿಸಜಾಕ್ಷಿ=ಕಮಲದೋಪಾದಿಯಲ್ಲಿರವ ಕಣ್ಣುಗಳುಳ್ಳ ; ಬಿಸ+ಜ=ತಾವರೆಯ ಬಳ್ಳಿಯಲ್ಲಿ ಹುಟ್ಟಿದುದು. ಜಾನಕಿ=ಜನಕರಾಯನ ಮಗಳಾದ ಸೀತೆ. ಕುಶಲ=ಕ್ಷೇಮ ವಿಭೀಷಣನ ಹೇಳಿಕೆಯಿಂದ ಸೀತೆಯು ಕ್ಷೇಮವಾರ್ತೆಯನ್ನು ಪಡೆದು. ಮನವುಕ್ಕಿ=ಸಂತೋಷಪಟ್ಟು.

20. ಮುದ್ರಿಕೆ = ಉಂಗುರ.

21. ಬಾಳುವೆ—ಭಾವರೂಪ ; ಧಾ.—ಬಾಳ್. ಒಳಿತ್ತು = ಒಳ್ಳೆಯದು, ಚೆನ್ನಾದುದು. ವಾಲಿಯನುಜ = ವಾಲಿಯ ತಮ್ಮನಾದ ಸುಗ್ರೀವ. ನೆರಹಿ = ಸೇರಿಸಿ ; ಧಾ.—ನೆರ ; ಭಾವರೂಪ—ನೆರವಿ. ಭಟರು—ವೀರರು.

22. ಪಾಳಯ = ಸೇನೆಯಿಳಿವ ಸ್ಥಳ ; ಇಲ್ಲಿ—ಸೈನ್ಯ. ಶರನಿಧಿ = ಸಮುದ್ರ ; (ಶರ = ನೀರಿನ, ನಿಧಿ—ಆಶ್ರಯ ಸ್ಥಾನ) ಮೇಳೈಸಿ = ಒಟ್ಟಾಗಿ ಸೇರಿ. ಇಹುದು = ಇರುವುದು. ನಿಮ್ಮಡಿ—ಇಲ್ಲಿ—'ಅಡಿ' ಶಬ್ದವು ಗೌರವಾರ್ಥವನ್ನು ಸೂಚಿಸುತ್ತದೆ ; ಈಗಲೂ 'ನಿಮ್ಮಪಾದ' ಎಂದು ಹೇಳುವುದುಂಟು.

23. ತಾನೆನುತ = ನಾನು ಎಂದು. ಪೊಡೆಮಡು = ನಮಸ್ಕರಿಸು. ಪೊಡೆ = ಹೊಟ್ಟೆಯನ್ನು. ಮಡು = ನೆಲಕ್ಕೆ ತಾಕಿಸು ಎಂದರೆ ದಂಡಪ್ರಣಾಮಮಾಡು ; ಧಾ.—ಮಡು, ಸಂಧಾನೆ.

24. ಬಿನ್ನಹ—ತ್ಸ.—ವಿಜ್ಞಾಪನೆ. ಅದ = ಅದನ್ನು. ಚೆನ್ನೆ = ಚೆನ್ನಾಗಿರುವಳು, ಸುಂದರಿ. ತಾಳಿ—'ತಾಳು' ಧಾತುವಿನ ಭೂತನ್ಯೂನರೂಪ.

25. ಕೈಕೊಂಡು = ತೆಗೆದುಕೊಂಡು. ಸುತ್ತಣ = ಸುತ್ತಲಿರುವ.

26. ಹೂಣುತ್ತ = ಒಂದೊಂದುವೇಳೆ ಮರೆಯಾಗಿ ನಿಲ್ಲುತ್ತ. ಮಿಣುಕುತ್ತ = ಒಂದೊಂದುವೇಳೆ ಕಣ್ಣಿಗೆ ಕಾಣಿಸಿಕೊಳ್ಳುತ್ತ. ಎಣಿಕೆಗೊಳ್ಳದೆ = ಹಗೆಗಳು ಎದುರಿಸಿ ನಿಂತರೂ ಸಡ್ಡೆಮಾಡದೆ.

27. ಸೊಕ್ಕಿದ = ಹೆಮ್ಮೆಯಿಂದ ಮೈಮರೆತ. ಅಸುರ—ಯಾರು ? ಮಿಕ್ಕು—ಮಿತಿಮೀರಿ ; 'ಮಿಗು' ಧಾತುವಿನ ಭೂತನ್ಯೂನ. ಉರಿನೋಡಿ = ಉರಿಯನ್ನು ನೋಡಿ ; ಕ್ರಿಯಾಸಮಾಸ.

28. ಅಕ್ಕರು = ಪ್ರೀತಿ. ಕಿಚ್ಚು = ಬೆಂಕಿ. ಗಕ್ಕನೆ = ಜಾಗ್ರತೆಯಾಗಿ.

30. ಸಂತಸವ = ಸಂತೋಷವನ್ನು. ಬೀರಿದನು = ಕೊಟ್ಟನು ಉಂಟುಮಾಡಿದನು.

4. ಸರ್ವಜ್ಞನ ವಚನಗಳು.

31. ಸರ್ವ + ಜ್ಞ = ಎಲ್ಲವನ್ನೂ ಅರಿತವನು. ಕರ್ತನು ಉಂಟುಮಾಡಿದವನು. ಸೃಷ್ಟಿಸಿದವನು.

32. ಚಂದನವ = ಶ್ರೀಗಂಧವನ್ನು. ಕರಗಿಸಲು = ತೇದರೂ. ಬೆಂದು = ಅಗ್ನಿಯಲ್ಲಿ ಹಾಕಿದರೂ. ಪರಿಮಳವಕ್ಕು = ಸುವಾಸನೆಯಾಗುವುದು. ಹಾಗೆಯೇ. ಸಂದ = ಶ್ರೇಷ್ಠವಾದ ; 'ಸಲ್' ಎಂಬ ಧಾತುವಿನ ಭೂ. ನ್ಯೂ. ಅರಿವು = ತಿಳಿವಳಿಕೆ, ಜ್ಞಾನ. ನೊಂದು = ಶ್ರಮವನ್ನು ಪಟ್ಟರೂ. ಸೈರಿಪುದು = ಸೈರಣೆಯುಳ್ಳವನಾಗಬೇಕು, ತಾಳಿಕೊಳ್ಳಬೇಕು ; 'ಸೈರಿಪನು' ಎಂದಿದ್ದರೆ ಚೆನ್ನಾಗಿದ್ದಿತು.

33. ನೀರಾಟ = ನೀರಿನಲ್ಲಿ ಆಡುವುದು, ಜಲಕ್ರೀಡೆ. ಬಿರುನುಡಿ = ಬಿರುಸಾದ ಮಾತು ; ನಿಷ್ಠುರ ಬೆಟ್ಟಿತು + ನುಡಿ ; ಬೆಟ್ಟಿತು ಎಂಬುದು ಸಮಾಸದಲ್ಲಿ 'ಬಿರು' ಎಂದಾಗುತ್ತದೆ. ಅಂಜು = ಬೆದರು ; ಭಾ. ರೂ.—ಅಂಜಿಕೆ.

34. ಹುತ್ತು = ಗೆದ್ದಲಹುಳು ಕಟ್ಟುವ ಗೂಡು. ಸತ್ತಿಗೆ = ಕೊಡೆ ; ಛತ್ರಿಕ ಎಂಬ ಸಂಸ್ಕೃತ ಶಬ್ದದ ತದ್ಭವರೂಪ. ಅರಸು = ದೊರೆ, ರಾಜ.

35. ನೀಡು = ನೋಡು. ನನ್ನಿ = ದಿಟ, ನಿಜ, ಸತ್ಯ, ಕೈಲಾಸ = ಶಿವಲೋಕ. ಬಿನ್ನಣವಕ್ಕು = ತಿಳಿವಳಿಕೆಗೆ ಬರುವುದು ; ಬಿನ್ನಣ ಎಂಬುದು ವಿಜ್ಞಾನ ಎಂಬ ತತ್ಸಮಪದದಿಂದ ಹುಟ್ಟಿದೆ.

36. ಉಣ್ಣದ = ತಾನು ಅನುಭವಿಸದ. ಒಡವೆ = ವಸ್ತು. ಚೆನ್ನಾಗಿ ನೆಲವನಾರಿಸಿದವ = ಹಣವಿರುವ ಸ್ಥಳವೇ ಕಾಣಿಸದಂತೆ ಮರ ನಟ್ಟವನು.

37. ಕೊಟ್ಟದ್ದು = ದಾನಮಾಡಿದುದು. ತನಗೆ = ತನ್ನ ಪ್ರಯೋಜನಕ್ಕೆ (ಬರುತ್ತದೆ) ; ಹೇಗೆ ? ಅದು ಮುಂದೆ ಕಟ್ಟಿದಾ

ಬುತ್ತಿ—ಊರಿಗೆ ಹೋಗುವವರು ಅನ್ನವನ್ನು ಕಟ್ಟಿಕೊಂಡು ಹೋಗುವಂತೆ ಇಲ್ಲಿ ದಾನಕೊಟ್ಟವರು ಪರಲೋಕಕ್ಕೆ ಧರ್ಮವನ್ನು ಕಟ್ಟಿಕೊಂಡು ಹೋಗುವರು.

38. ಹೊನ್ನಾಗದೆ = ಚಿನ್ನವಾಗದೆ, ಚಿನ್ನದಂತೆ ಶ್ರೇಷ್ಠವಾಗದೆ.

39. ಪುಣ್ಯವೆ ಮಾತಿ = ಪೂರ್ವಪುಣ್ಯದಿಂದ ಹಣಗಾರನಾಗಿ. ಇರುವು = ಸ್ಥಿತಿ ; 'ಇರು' ಧಾತುವಿನ ಭಾವರೂಪ. ಉಣ್ಣಿಗೂ = ಉಣ್ಣಿಗಿಂತಲೂ. ಕಷ್ಟ = ನೀಚವಾದುದು , ಪ್ರಯೋಗ—'ಕಷ್ಟಲೋಭಿ', 81ನೆಯ ಪದ್ಯವನ್ನು ನೋಡು. ಆಡಿ = ಮಾತುಕೊಟ್ಟು.

40. ರೂಢಿಯೊಳಗೆ = ಜನಗಳ ಮಾತಿನಲ್ಲಿ,

41. ಹಾವಸೆಯ ಕಲ್ಲ = ಪಾಚಿ ಬೆಳೆದಿರುವ ಕಲ್ಲನ್ನು. ಬಲ್ಲಿದವರು = ಬಲಿಷ್ಠರು, ದೊಡ್ಡವರು. ಸೆಣಸು = ಕಲಹಮಾಡು.

42. ಮನುಜರು = ಮನು + ಜ ; ಮನು ಎಂಬುವನ ವಂಶದಲ್ಲಿ ಹುಟ್ಟಿದವರು, ಮನುಷ್ಯರು. ಜರೆಯದಿರು = ಹೀಯಾಳಿಸಬೇಡ. ಓಲಗದೊಳು = ರಾಜಸಭೆಯಲ್ಲಿ, ಆಸ್ಥಾನದಲ್ಲಿ.

43. ನೂರ್ಕಾಲ = ನೂರು + ಕಾಲ ; ಬಹುಕಾಲ ಗೋರ್ಕಲ್ಲ = ಗೋರಿಕಲ್ಲು. ಮಳೆಗರೆದರೆ = ಮಳೆ + ಕರೆದರೆ ; ಹೊಯ್ದರೆ.

44. ಹಾಲೋಗರುಂಡಂತೆ = ಹಾಲೋಗರ + ಉಂಡಂತೆ. ಸಾಲಿಗ = ಇಲ್ಲಿ—ಸಾಲವನ್ನು ಕೊಟ್ಟವನು. ಕಿಬ್ಬದಿ = ಕೆಳಗು + ಬದಿ. ಬದಿ = ಪಕ್ಕ, ಪಾರ್ಶ್ವ.

45. ಜೇಡದಲೆ = ಜೇಡಗೆಯ. ಈ ರೂಪವು ವ್ಯಾಕರಣಸಮ್ಮತವಾದುದಲ್ಲ : ಆದರೂ ಬಳಕೆಯಲ್ಲಿದೆ. ಈ ಪದ್ಯವನ್ನು 40 ರೊಡನೆ ಹೋಲಿಸು.

47. ಡೊಂಕಾದರೊಳಗೆ = ಡೊಂಕಾದರೂ + ಒಳಗೆ. 47, 48 ಪದ್ಯಗಳ ಕೊನೆಯ ಪಾದದಲ್ಲಿ ಪ್ರಾಸವು ತಪ್ಪಾಗಿದೆ. ಹೊರಗೆ ನೇರವಾಗಿ ಕಾಣಿಸದಿದ್ದರೂ ಸಜ್ಜನರು ಹೃದಯದಲ್ಲಿ ಒಳ್ಳೆಯವರಾಗಿದ್ದಾರೆ ಎಂದು ತಾತ್ಪರ್ಯ.

48. ದುರ್ಜನರು ಹೊರಗೆ ನೇರವಾಗಿ ಇದ್ದುಕೊಂಡರೂ ಒಳಗೊಳಗೆ ಕೆಟ್ಟವರಾಗಿರುವರು ಎಂದು ತಾತ್ಪರ್ಯ.

49. ಬರೆ = ಮನೆಗೆ ಬರಲು. ಕುಳ್ಳಿರು = ಕುಳಿತುಕೊ. ಸಜ್ಜನಿಕೆ = ಸಜ್ಜನ + ಇಕೆ ; ಒಳ್ಳೆಯವನ ಗುಣ. ಸಖ್ಯವ = ಸ್ನೇಹವನ್ನು.

80. ಹುಸಿದೊಡೆ = ಸುಳ್ಳು ಹೇಳಿದರೆ. ಬತ್ತಿ = ದಡವನ್ನು ಮೀರಿ ಒಡೆದುಕೊಂಡು.

51. ಅಕ್ಕು = ಆಗುವನು.

52. ಮೆದ್ದಂತೆ = ಸವಿನೋಡಿದಂತೆ ; ಧಾ.—ಮೆಲ್ಲು. ಅಜ್ಞಾನಿ = ತಿಳಿಯದವನು.

53. ಹೆಜ್ಜೇನು = ಹೆಜ್ಜೇನಿನ ತುಪ್ಪ. ರೊಚ್ಚು = ಕೆಸರು.

54. ಮಾನಹೀನರು = ಮಾನವಿಲ್ಲದವರು.

55. ನೆಲೆಗಟ್ಟು = ತಳಹದಿ. ಕೂಪ = ಭಾವಿ. ನೇಣುಹರಿದಂತೆ = ಹಗ್ಗ ಕಿತ್ತುಹಾಗೆ. ಕೋಪಿ = ಕೋಪವುಳ್ಳವನು.

5. ಬಗಟೆಗಳು.

56. ಉಲಿವುದು = ಸದ್ದುಮಾಡುತ್ತದೆ. ಕವಿಕುಲ = ಕವಿಗಳ ಗುಂಪು.

57. ಸೊಲ್ಲು = ಮಾತು. ಸೋಜಿಗ = ಆಶ್ಚರ್ಯ. ಠಾವು = ಸ್ಥಳ.

58. ಮೂಡಿಮುದ = ಹುಟ್ಟಿದುದನ್ನು ; ಧಾ. = ಮೂಡು.

59. ಇರಿದರೆಯು = ತಿವಿದರೂ. ಏರಿಲ್ಲ = ಏರು + ಇಲ್ಲ = ಗಾಯವಿಲ್ಲ. ತಿರಿಗೊಳ ಕೊಂಡ = ಯಾಚಿಸಿ ತಂದ ಅನ್ನವನ್ನು ತಿಂದ. ಋಣ = ಸಾಲ.

60. ಹುತ್ತಿನ ಹುಳ = ಹಾವು. ಮುತ್ತೇ = ಮುತ್ತಿನಂತೆ ಶ್ರೇಷ್ಠವಾದವನೇ.

6. ದಾಸರ ಪದಗಳು.

61. ಮದಕರಿ = ಮದಿಸಿದ ಆನೆ. ಕಲಕಿ = ಇಲ್ಲಿ—ಕೆದಕಿ.

62. ಕಾಲಮೇಘ = ಪ್ರಳಯಕಾಲದ ಮೇಘ. ಶೂಲಪಾಣಿ = ಕೈಯಲ್ಲಿ ಶೂಲವುಳ್ಳವನು, ಈಶ್ವರ. ಫಣಿ—ದ್ಭ—ಹಣಿ. ಕಾಳುಮೂಳರು = ಕೆಲಸಕ್ಕೆ ಬಾರದವರು, ಕೆಟ್ಟವರು.

63. ಕಾಳ್ಕಿಚ್ಚು = ಕಾಡು + ಕಿಚ್ಚು, ಕಾಡುಗಿಚ್ಚು. ಸರಿಸ = ಹತ್ತಿರ. ಮರಸಿ = ಕಣ್ಣಿಗೆ ಕಾಣಿಸಿಕೊಳ್ಳದೆ, ಮೋಸದಿಂದ.

64. ಪುಚ್ಛ = ಬಾಲ ; ಇದು ಚೇಳು. ದಂತ = ಹಲ್ಲು ; ಇದು ಹಾವು. ದೇಹ = ಮೈ ; ಇವರೆ ದುರ್ಜನರು. ಘೋರ = ಭಯಂಕರವಾದ.

7. ಪ್ರಯೋಜನವಿಲ್ಲದ ಕಾರ್ಯಗಳು.

65. ನರಗೆ = ಮನುಷ್ಯನಿಗೆ. ಅಮೃತಾನ್ನ = ರುಚಿಯಾದ ಊಟ. ಮಡಿವರ್ಗ = ಮಡಿಮಾಡಿದ ಬಟ್ಟೆಗಳು. ಗಾಂಭೀರ್ಯ = ಗೌರವ. ಹಂಬಲಿಸು = ಕೊರತೆಪಡು. ಡಂಭ = ಗರ್ವ, ಹೆಮ್ಮೆ.

66. ನಂಬುಗೆ = ನಂಬಿಕೆ. ಕ್ಲೇಶ = ದುಃಖ. ಒಡಲು = ಮೈ.

67. ಭೂಷಣ = ಒಡವೆ. ಓಡು = ಮಡಕೆಯ ಹೋಳು. ಹರಿವಾಣ = ತಳಿಗೆ. ಲೋಭಿ = ಜಿಪುಣ, ಜೀನಿಗ. ಬಿಂಕ = ಹೆಮ್ಮೆ, ಗರ್ವ. ಮೋಡಿ = ಹಟ, ಛಲ.

8. ದುರ್ನೀತಿಯೇ ಹೊಲೆತನ.

68. ಶೀಲ = ಒಳ್ಳೆಯ ನಡತೆ. ದಣಿ—ದ್ಭ—ಧನಿ = ಒಡೆಯ. ಎರಡುಬಗೆವಾತ = ಮೋಸಮಾಡುವವನು.

69. ಲಂಡತನ = ಕೆಟ್ಟತನ.

70. ಇದ್ದಾಗ = ಕೈಯಲ್ಲಿ ಹಣವಿದ್ದಾಗ. ದಾನ = ಕೊಡುವುದು. ಮದ್ದು = ಔಷಧ ; ಇಲ್ಲಿ ವಿಷ. ಬದ್ಧವಹ = ಸರಿಯಾಗಿರುವ, ನಿಜವಾದ, ಅಬದ್ಧವಲ್ಲದ. ನಯದ = ನುಣುಪಾದ, ನೀತಿಯುಕ್ತವಾದ, ಒರಟಲ್ಲದ. ಶುಂಠ = ಏನೂ ತಿಳಿಯದ ಜಿಪ್ಪ.

71. ಆಸೆಮಾತು = ಆಸೆಯನ್ನು ಉಂಟುಮಾಡುವಂತೆ ಆಡಿದ ಮಾತು. ಲೇಸು = ಒಳ್ಳೆಯದು. ಉಪಕಾರ = ಹಿತ. ಮುನಿದು = ಕೋಪಮಾಡಿಕೊಂಡು ; ಭಾವರೂಪ—ಮುನಿಸು. ಕೆಡಿಪಾತ = ಕೆಡಿಪ (ಕೆಡಿಸುವ) + ಆತ. ಹೀನನು + ಅವ = ಹೀನನವ, ಹೀನನಾದವನು, ಕೆಟ್ಟವನು, ತಾತ್ಪರ್ಯ—ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ಹೊಲೆಯನು (ಹೊಲೆಯನು ಎಂದರೆ ನೀಚನು) ಎನ್ನಿಸಿಕೊಳ್ಳುವುದಿಲ್ಲ. ಒಳ್ಳೆಯ ಕುಲದಲ್ಲಿ ಹುಟ್ಟಿದರೂ ಕೆಟ್ಟ ಚಾಳಿಯವನು ಹೊಲೆಯನು ಎನಿಸಿಕೊಳ್ಳುವನು.

### 9. ಮೂರ್ಖರು.

72. ಒಂಟಿಯಲ್ಲಿ = ಒಂಟಿಯಾಗಿ, ಒಬ್ಬಳೆ, ಜತೆಯಿಲ್ಲದೆ. ಗಂಟನು—ಹಣದ ಗಂಟನ್ನು. ಕಡುಮೂರ್ಖ = ಅತಿಮೂರ್ಖ.

73. ಪಡೆದ = ಹೆತ್ತ. ದುಡ್ಡಿನ ಆಸೆಗೆ ಮಗಳನ್ನು ಅಯೋಗ್ಯವಾದವರನಿಗೆ ಕೊಡುವವನು ಮೂರ್ಖನು. ಮರುಗು = ಕೊರಗು. ದೃಢಬುದ್ಧಿಯಿಲ್ಲದವ = ಒಂದೇ ಮನಸ್ಸಿಲ್ಲದವನು, ಚಪಲಚಿತ್ತ.

74. ಕರೆವಾತ = ಹಾಲ ಕರೆವವನು. ಬತ್ತೆ = ಅಡವು. ಹಲುಬುವವ = ಕಳೆದುಕೊಂಡುದನ್ನು ನೆನಸಿಕೊಂಡು ಅಳುವವನು.

75. ಸ್ವಾಮಿನಾಮವ = ದೇವರ ನಾಮವನ್ನು. ಭಜಿಸು = ಭಜನೆಮಾಡು. ಹೇಮ = ಚಿನ್ನ, ಹೊನ್ನು ಎಂದರೆ ಹಣ. ಗಳಿಸು = ಸಂಪಾದಿಸು. ನೇಮ = ನಿಯಮ. ನಮಿಸದವ = ನಮಸ್ಕಾರಮಾಡದವನು. ತಾಮಸರ = ತಮೋಗುಣವುಳ್ಳವರನ್ನು, ಕೆಟ್ಟವರನ್ನು.

### 10. ಮಹಾನವಮಿಯ ಪದಗಳು.

76. ಆಶ್ವಯುಜಶುದ್ಧ ಮಹಾನವಮಿ = ಆಶ್ವಯುಜ ಮಾಸದ ಶುಕ್ಲಪಕ್ಷದ ಮಹಾನವಮಿ, ಎಂದರೆ ನವರಾತ್ರಿಯ ಹಬ್ಬ. ಶಾಶ್ವತದಿ = ತಪ್ಪದೆ, ಸ್ಥಿರವಾಗಿ ನಿಲ್ಲುವಂತೆ. ಹರಸು = ಆಶೀರ್ವ

ದಿಸು ; ಇಲ್ಲಿ—ಹರಕೆಮಾಡಿಕೊಳ್ಳು. ಬಾಲಕರು = ಹುಡುಗರು. ಈಶ = ದೇವರು.

77. ಧನ = ಹಣ. ಕನಕ = ಚಿನ್ನ. ವಸ್ತು = ಪದಾರ್ಥ, ದವಸ. ವಾಹನ = ಆನೆ ಕುದುರೆ ಮೊದಲಾದವು. ಕನಕದಂಡಿಗೆ = ಚಿನ್ನದ ಪಾಲಕ್ಕಿ. ಚೌರಿ = ಚಾಮರ. ರಾಜಮನ್ನಣೆ = ರಾಜರಿಂದ ಆಗಬಹುದಾದ ಬಹುಮಾನ.

78. ಛತ್ರ = ಕೊಡೆ, ಛತ್ರಿ. ತೇಜಿ = ಕುದುರೆ. ಅರ್ಥಿ = ಪ್ರೀತಿ; ಹಳಗನ್ನಡ ಅಳ್ತಿ. ಮಾಲಕುಮಿ = ಶ್ರೀ—ಮಹಾಲಕ್ಷ್ಮಿ. ಬಲಿಯುಲಿ = ಪ್ರಸನ್ನಳಾಗಲಿ. ಪೌತ್ರ = ಮೊಮ್ಮಗ.

79. ಧರೆ = ಭೂಮಿ ; ಇಲ್ಲಿ—ಜನರು. ತಣಿಯಲಿ = ತೃಪ್ತಿಪಡಲಿ. ತಿಳಿಗೊಳ = ತಿಳಿನೀರುಳ್ಳ ಕೊಳ. ಉಕ್ಕ = ತುಂಬಿತುಳುಕಿ. ತುರು = ಹಸು. ನಳಿನಮುಖಿಯರು = ಕಮಲದಹಾಗೆ ಮನೋಹರವಾದ ಮುಖವುಳ್ಳವರು. ಸುಪುತ್ರರ = ಒಳ್ಳೆಯ ಮಕ್ಕಳನ್ನು. ಇಳೆ = ಭೂಮಿ.

80. ಆಯುರಾರೋಗ್ಯ = ಆಯುಸ್ಸೂ ಆರೋಗ್ಯವೂ ಎಂದರೆ ರೋಗರುಜನವಿಲ್ಲದೆ ಬಹುಕಾಲ ಬಾಳುವಿಕೆ. ಶ್ರೇಯಸ್ಸು = ಮೇಲ್ಮೆ. ಸಂಪತ್ತು = ಐಶ್ವರ್ಯ. ಅಯುತದಿ = ಹೆಚ್ಚಾಗಿ. ಜಗದೊಡೆಯ = ದೇವರು. ಒಲವು = ಪ್ರೀತಿ. ಪ್ರೀಯ—ಇದು 'ಪ್ರಿಯ' ಎಂಬ ಮಾತಿನ ಗ್ರಾಮ್ಯರೂಪ.

81. ಪಚ್ಚಡ = ಒಲ್ಲಿ. ಅಯ್ಯಗಳು = ಉಪಾಧ್ಯಾಯರು. ಸರಸತಿಯು = ಸರಸ್ವತೀದೇವಿಯು.

82. ಅಳಿಯ....ವರೆ = ಕೋಪಿಸಿಕೊಂಡು ಕೇಳೋಣವೆಂದರೆ ಇದು ಅಳಿಯನಿಗೆ ಕೊಡುವ ಉಡುಗೊರೆಯಲ್ಲ ; ನಿಂತುಕೊಂಡು ಕೇಳಿಕೊಳ್ಳೋಣವೆಂದರೆ ಬಳಿಯು = ಆಳಿನ ಸಂಬಳವಲ್ಲ ; ನಿಮ್ಮನ್ನು ಕಾಡಿ ತೆಗೆದುಕೊಳ್ಳೋಣವೆಂದರೆ, ಇದು ಹಳೆಯ ಸಾಲವಲ್ಲ ; (ಆದುದರಿಂದ) ಕೀರ್ತಿಯನ್ನು = ಯಶಸ್ಸನ್ನು

ಸಂಪಾದಿಸಬೇಕಾದರೆ ಅಳವುನವ = ಕೀಳುಬುದ್ಧಿಯನ್ನು ಮಾಡದೆ ಇರಿ. ಧಾರಾಳವಾಗಿ ಕೊಡಿ.

83. ಇಂದು ಈ ದಿವಸ ; ಅರ್ಥಾಂತರ—ಚಂದ್ರ, ಬವಣಿ || ದ್ಭ.—ಭ್ರಮಣ, ಸಂಚಾರ, ಸುತ್ತು. ಉಚಿತ ಮರ್ಯಾದೆ ಕಡಬಡ್ಡಿ = ಸಾಲದ ಬಡ್ಡಿ.

84. ಬಿಟ್ಟಿ = ಹಿಂದಿನ ಕಾಲದಲ್ಲಿ ಅರಮನೆಗಾಗಿ ಕೂಲಿ ಇಲ್ಲದೆ ಜನರು ಮಾಡಿಕೊಡುತ್ತಿದ್ದ ಕೆಲಸ. ಬೀಡಾರ = ಇದು ಬಿಡಾರವೆಂದಿರಬಹುದು. ತೆಗೆ = ಹೋಗು.

85. ಜಡಗೇಡಿ = ಸೋಮಾರಿ. ಗಂಡ = ಶತ್ರುವಾದವನು ; ಇಲ್ಲಿ—ಮೆಟ್ಟುವವನು ; ಅರ್ಥಾಂತರ—ಪತಿ, ಅಪಾಯ, ಕೆನ್ನೆ. ಕಲಿಕರ್ಣ = ಕಲಿಯುಗದ ಕರ್ಣ ; ಹಿಂದೆ ಕರ್ಣನು ದಾನ ಕೊಡುವುದರಲ್ಲಿ ಮೇಲುಗೈಯೆಂದು ಭಾರತದ ಕಥೆ.

## 11. ಕರ್ಣಾಟಕದೇಶದ ವರ್ಣನೆ.

86. ಮೇರುಗಿರಿ = ಮೇರುಪರ್ವತ, ದಕ್ಷಿಣಭಾಗ = ತೆಂಕದೆಸೆ. ಅಭಿರಾಮತೆವಡೆದು = ಅಂದವನ್ನು ಹೊಂದಿ. ಕರ್ಣಾಟಮಹೀಮಂಡಲ = ಕನ್ನಡದೇಶ ಗಾಡಿ = ಸೊಬಗು.

87. ವಸುಧಾತಲವಲಯ = ಮಹೀಮಂಡಲ. ಭಾವಿಸೆ = ನೋಡಲು, ವಿಚಾರಿಸಲು. ಜನಪದ = ದೇಶ. ಬಣ್ಣಿಸುವನು = ವರ್ಣಿಸುವನು.

88. ಗ್ರಾಮ = ಹಳ್ಳಿ. ನಗರ = ಊರು. ಖೇಡ = ಖೇಟ, ಅರೆವಾಸಿ ಊರು. ಖರ್ವಡ = ನಾನೂರು ಹಳ್ಳಿಗಳಿಗೆ ಮುಖ್ಯವಾದ ಊರು. ದುರ್ಗ = ಪ್ರವೇಶಿಸಲು ಕಷ್ಟವಾದ ಕೋಟೆ, ಜಲದುರ್ಗ ಗಿರಿದುರ್ಗ ಮೊದಲಾದುವು. ದ್ರೋಣಾಮುಖ = 400 ಹಳ್ಳಿಗಳಿಗೆ ಮುಖ್ಯವಾದ ಊರು ಸಂದೋಹ = ಗುಂಪು. ಆಡುಂಬೊಲ = ಆಡುವ + ಹೊಲ, ಕ್ರೀಡಾಸ್ಥಾನ.

89. ಭೂರಮೆ=ಭೂಮಿಯೆಂಬ ಸ್ತ್ರೀ. ದುಕೂಲ=ನವಿರುಬಟ್ಟೆ. ಕಣ್ಗೊಳಿಪ=ಸೊಗಸಾದ, ಭೂರಿ=ಅನೇಕವಾದ. ಒರಂತೆ ಒಂದೇ ರೀತಿಯಾಗಿ. ಪರಿದು=ಹರಿದು.

90. ಅಮರ್ದು=ಅಮರುವ ಹಾಗೆ, ಎಂದರೆ ಚೆನ್ನಾಗಿ ಸೇರಿಕೊಳ್ಳುವ ಹಾಗೆ; ಅರ್ಥಾಂತರ—ಅಮೃತ. ಅಪ್ಪಲು=ಅಪ್ಪಿಕೊಳ್ಳಲು. ತೊರೆವೆಣ್ಗಳ್=ತೊರೆ+ಪೆಣ್ಗಳ್=ನದಿಗಳೆಂಬ ಹೆಂಗಸರು. ಕರಂ=ಹೆಚ್ಚಾಗಿ. ಪರಿಕಾಲ್ಗಳ್=ಹರಿವ ಕಾಲುವೆಗಳು. ನಾಡ=ದೇಶದ.

91. ಅಲರ್ವುಡಿವೆರಸಿ=ಅಲರು+ಪುಡಿ+ಬೆರಸಿ=ಹೂವಿನ ದೂಳಿ (ಪರಾಗ) ಗಳೊಡನೆ ಬೆರಸಿ. ಪೊನಲಲ್ಲಿ=ಪೊನಲು+ಅಲ್ಲಿ ಹೊನಲು=ಪ್ರವಾಹ. ಕುಂಕುಮರಸ=ಕೇಸರಿಕದಡಿದ ನೀರು. ನೋಳ್ಪರಿಗೆ=ನೋಡುವವರಿಗೆ.

92. ನಂದನ=ಇಂದ್ರನ ತೋಟ. ಆನಂದವನು=ಸಂತೋಷವನ್ನು ಕುಂದದ=ಕಡಿಮೆಯಾಗದ. ಫಲತತಿ=ಹಣ್ಣುಗಳ ಗೊಂಚಲು, ವನವೃಂದಂ=ತೋಟಗಳ ಸಾಲು.

93. ನಾರಿಕೇಳ=ತೆಂಗು. ಆಮ್ರ=ಮಾವು. ಪನಸ=ಹಲಸು. ಕದಳಿ=ಬಾಳೆ, ಖರ್ಜೂರ=ಉತ್ತುತ್ತಿ, ಚಂಪಕ=ಸಂಪಗೆ. ಚಂದನ=ಶ್ರೀಗಂಧ. ಆರಾಮ=ಹೂದೋಟ, ಉಪವನ. ರಂಜಿಸುತ=ಸೊಗಸಾಗಿ. ಪಾರಣೆ=ಉಪವಾಸದ ಮರುದಿನದ ಊಟ; ಇಲ್ಲಿ—ಹಬ್ಬ, ಸಂತೋಷ. ಪಾಂಥಜನ=ದಾರಿ ನಡೆಯುವವರು, ಮಾರ್ಗಸ್ಥರು.

94. ದೇವಮಾತೃಕ=ಮಳೆಯ ನೀರಿನಿಂದ ಪೈರಾಗುವ ನೆಲ. ನದೀಮಾತೃಕ=ಹೊಳೆಯ ನೀರಿನಿಂದ ಪೈರಾಗುವ ನೆಲ. ಉರ್ವರೆ=ಎಲ್ಲಾ ವಿಧವಾದ ಪೈರೂ ಬೆಳೆವ ಉತ್ತಮವಾದ ಭೂಮಿ ದೇವಲೋಕ—ಇಂದ್ರಲೋಕ. ಪಳಿಸು=ಹಾಸ್ಯಮಾಡು. ಭೂವನಿತೆ=ಭೂರಮೆ. ಧಾನ್ಯ=ದವಸ. ಅಕ್ಷಯನಿಧಿ=ಎಷ್ಟೆಷ್ಟು ತೆಗೆದುಕೊಂಡರೂ ತುಂಬಿಯೇ ಇರುವ ಕಣಜ. ಆವಗಂ=ಎಲ್ಲಾ ಕಾಲದಲ್ಲಿಯೂ.

95. ಅಳಿ=ದುಂಬಿ, ಅಂಬುಜ=ಅಂಬು+ಜ, ನೀರಿನಲ್ಲಿ ಹುಟ್ಟಿದ ತಾವರೆ. ವಿಲಸಿತ=ಮನೋಹರವಾದ. ಕಲೂರ್ಗಳು=ಹಕ್ಕಿಗಳು,

96. ಪಲ್ಲವ=ಚಿಗುರು. ಮಲ್ಲಿಕಾಲತಿಕೆ=ಮಲ್ಲಿಗೆಯ ಹಂಬು. ಭೋಗಿಗಳು=ಸರ್ಪಗಳು; ಅರ್ಥಾಂತರ—ಹಾವುಗಳು; ಎಲ್ಲವೂ ಸಮೃದ್ಧಿಯಾಗಿ ಸುಖಪ್ರದವಾಗಿದ್ದುವು ಎಂದು ತಾತ್ಪರ್ಯ.

97. ನಡೆವಕ್ಕಿ=ನಡೆಗೆ ಪ್ರಸಿದ್ಧವಾದ ಹಕ್ಕಿ, ಹಂಸ. ಹಾಗೆಯೇ ನುಡಿವಕ್ಕಿ=ಗಿಳಿ. ಹೊಳೆವಕ್ಕಿ = ಹೊಳೆಯಲ್ಲಿರುವ ಕೊಕ್ಕರೆ. ಪೊಣರ್ವಕ್ಕಿ=ಜೋಡಿ ಹಕ್ಕಿ, ಚಕ್ರವಾಕ. ಪಡಿಯರವಕ್ಕಿ=ಮನ್ಮಥನಿಗೆ ಪಡಿಯರ ಎಂದರೆ ಪ್ರತಿಹಾರಿಯಾಗಿ ಇರುವ ಕೋಗಿಲೆ. ಮನೆವಕ್ಕಿ—ಸ್ನೇಹಕ್ಕೆ ಪ್ರಸಿದ್ಧವಾದ ಪಾರಿವಾಳ ಹಕ್ಕಿ. ಗರಿಗಣ್ವಕ್ಕಿ=ಗರಿಯಲ್ಲಿ ಕಣ್ಣುಗಳಂತಿರುವ ಚಿತ್ರವುಳ್ಳ ನವಿಲು.

98. ಅಲರ್=ಅರಳಿದ. ಸುಕ್ಕಲರ್=ಅರ್ಧವಿಕಸಿತವಾದ, ಸ್ವಲ್ಪವೆ ಅರಳಿದ. [illegible]=ಕೆಂದಾವರೆ ಹೂ. ಶಾಲಿವನ=ಬತ್ತದ ಗದ್ದೆ. ಜೀವನದ ನೆಲೆಯಾದ ಸ್ಥಾನ.

99. ಅಂಚೆ=ಹಂಸಪಕ್ಷಿ. ಅರಗಿಳಿ=ಅರಸು+ಗಿಳಿ, ಬಳ್ಳಿಯ ಜಾತಿಯ ಗಿಳಿ, [illegible]=ಭ್ರಮರ. ಎದೆಗೆಡಿಪುವು,=ಎದೆ+ಕೆಡಿಪುವು ಎದೆಗುಂದಿಸುತ್ತವು, ಧೈರ್ಯವನ್ನು ಹೋಗಲಾಡಿಸುವುವು. ಪಥಿಕರು=ಮಾರ್ಗಸ್ಥರು.

100. ಸೊಬಗನು=ಸೌಂದರ್ಯವನ್ನು. ಎಡೆಬಿಡದೆ=ಬಿಟ್ಟಿರದೆ. ಕಡೆಗೋಡಿಗಳಿಂದ=ಕಡೆಯ ಕೋಡಿಗಳಿಂದ. ಬಲ್ಗರೆ=ಬಲ್ಲಿತು+ಕೆರೆ=ಬಲವಾದ ಕೆರೆ. ಪೊಡವಿ=ದ್ಭ.—ಪೃಥಿವಿ, ಭೂಮಿ.

101. ಅಗೆವೊಯ್ವ—ಅಗೆ ತಾಕುವ, ಕಳೆಗಿಳ್ವ=ಕಳೆಯನ್ನು ಕೀಳುವ ಬೆದೆಯ ಬಿಚಾರವ=ಒತ್ತೊತ್ತಾಗಿ ಇದ್ದ ಪೈರನ್ನು ಹಕ್ಕಲುಹಕ್ಕಲಾಗಿ ಬಿಡಿಸುವ. ಬಗೆಯರಿದು=ಕ್ರಮವನ್ನು ತಿಳಿದು. ಊಡುವ=ಊಟಮಾಡಿಸುವ, ಇಲ್ಲಿ—ನೀರು ಹಾಯಿಸುವ,

ಸೆಸಿಯು=ವೈರಿನ; ತ್ರ_ಸಸ್ಯ. ನಗೆಮೊಗದ = ನಗುವುಳ್ಳ ಮುಖದ. ಪಾಮರಿಯರ=ಹೊಲವನ್ನು ಕಾವ ಹೆಂಗಸರ.

102. ಮುಡಿ=ತಲೆಯ ಕೂದಲಿನ ಕಟ್ಟು. ಆಚಾರದ ಬಟ್ಟೆ=ನಡವಳಿಕೆಯ ಕ್ರಮ, ಎಂದರೆ ಜಾತಿಯ ಕಟ್ಟು. ಆಜ್ಞೆ=ಅಪ್ಪಣೆ ಅರಸನ ಕಟ್ಟು ನಾಡೊಳದ........ಲ್ಲಿಲ್ಲ—ಕಟ್ಟು ಎಂಬ ಪದವನ್ನು ಮೇಲೆ ಹೇಳಿದ ಬಳ್ಳಿಯ ಅರ್ಥಗಳಲ್ಲಿ ಪ್ರಯೋಗಿಸುವವರೇ ಹೊರತು ಕೈಕಾಲುಗಳನ್ನು ಕಟ್ಟಿ ಸೆರೆಯಿಡು ಎಂಬ ಅರ್ಥದಲ್ಲಿ ಜನಗಳು ವ್ಯವಹರಿಸುವುದಿಲ್ಲ, ಎಂದರೆ ಆ ರಾಜ್ಯದಲ್ಲಿ ನ್ಯಾಯವು ನೆಲೆಗೊಂಡಿದ್ದಿತು ಎಂದು ಅರ್ಥ.

103. ತೋರದುರುಬು=ತೋರತುರುಬು = ದಪ್ಪನಾದ ತುರುಬು ತೊಂಡೆವಾಯ್ದೆರೆ=ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯ ತೆರೆ, ತುಟಿ. ಮುಗುಳ್ನಗೆ=ಅರಳದ ಮೊಗ್ಗಿನಂತಿರುವ ನಗೆ ಎಂದರೆ ನಸುನಗೆ. ಮೇರೆಯರಿದ=ಎಲ್ಲೆಯನ್ನು ತಿಳಿದ, ಎಂದರೆ ಮಿತವಾದ; ಹದವಾದ. ಮೆಲ್ವಾತು = ಮೃದುವಾದ ಮಾತು ಓರೆವೋಗದ=ಸರಿಯಾದ ಹಾದಿಯನ್ನು ಬಿಡದ, ತಪ್ಪಿಹೋಗದ. ಜಾಣ್ಮೆ= ಜಾಣತನ. ಪೆಣ್ಡಿರು =ಹೆಂಗಸರು.

104. ಹಂದೆ=ಹೇಡಿ. ವಿತರಣಗುಣಶೂರರು=ದಾನಕೊಡುವ ಗುಣದಲ್ಲಿ ಬಲುಗೈಯಾದವರು ಎಂದರೆ ಮಹಾದಾನಿಗಳು, ದಾನವೀರರು. ಸಾರಗುಣಗ್ರಾಹಿ=ಸಾರವಾದ ಎಂದರೆ ಒಳ್ಳೆಯ, ಗುಣಗಳನ್ನು ಗ್ರಹಿಸುವ. ರಸಿಕರು ಜಾಣರು, ತಿಳಿದವರು ದುರ್ವಿಕಾರಿ=ಕುಚೇಷ್ಟೆ ಮಾಡುವವರು.

105. ಅನೃತ=ಸುಳ್ಳು. ಅಜಿರಂಗ=ಯುದ್ಧಭೂಮಿ. ಎರೆದುದನು= ಬೇಡಿದುದನ್ನು. ಕೊಡದವರು=ಕೊಡದೆ ಇರುವವರು.

## 12. ಯುದ್ಧಸನ್ನಾಹ.

106. ಅಂತು=ಹಾಗೆ. ಸಂತತ..........ಪ್ರಭೆಯಿಂ=ಸಂತತ—ಸರ್ವಕಾಲದಲ್ಲಿಯೂ. ಸಕಲ ಸಮಸ್ತವಾದ. ಆಭರಣಗಳ, ಪ್ರ

ಭೆಯಿಂ=ಕಾಂತಿಯಿಂದ. ಅಮರೇಂದ್ರ=ಅಮರ+ಇಂದ್ರ, ದೇವೇಂದ್ರ. ಕ್ರಮವಿಕ್ರಮ=ವಂಶಾನುಕ್ರಮದಿಂದ ಬಂದ ಪರಾಕ್ರಮ.

107. ತಳರ್ದಂ=ಹೊರಟನು; ಧಾ.-ತಳರ. ರಜತಶಿಖರಿ=ಬೆಳ್ಳಿಯ ಬೆಟ್ಟ, ಕೈಲಾಸ, ಮುಂತೆ=ಮುಂದುಗಡೆಯಲ್ಲಿ+ಇರೆ=ಮುಂತಿರೆ, ಅನುಪಮನಾಮದ=ಅಸದೃಶವಾದ ಖ್ಯಾತಿಯುಳ್ಳ ಹೆಸರುಗೊಂಡ, ಅಥವಾ ಅನುಪಮನು ಎಂಬ ಹೆಸರುಳ್ಳ.

108. ಲಕ್ಷ್ಮೀಧರ=ಲಕ್ಷ್ಮಣ. ಉನ್ನತ........ಧರ—ಹೆಚ್ಚಾದ ಕೀರ್ತಿ ವಿಜಯ ಎಂಬ ಲಕ್ಷ್ಮಿಗಳನ್ನು ಧರಿಸಿದವನು, ಎಂದರೆ ಪ್ರಖ್ಯಾತನಾದ ಪರಾಕ್ರಮಶಾಲಿಯಾದ ಲಕ್ಷ್ಮಣನು. ಇರ್ವಕ್ಕ=ಎರಡು+ಪಕ್ಕ, ಎರಡು ಕಡೆ. ದೋರ್ವ್ವಗರ್ವಿತಖಚರರ್=ದೋರ್+ಬಲ+ಗರ್ವಿತ+ಖ+ಚರ; ತೋಳ ಬಲದಿಂದ ಹೆಮ್ಮೆಗೊಂಡು ಗಗನದಲ್ಲಿ ಸಂಚರಿಸುವ ಜಾಂಬವಂತನೇ ಮೊದಲಾದವರು. 108 ರಿಂದ 113ರ ವರೆಗೆ ಇರುವ ಪದ್ಯಗಳಲ್ಲಿರುವ ಭಾವರೂಪಕ್ರಿಯೆಗಳೆಲ್ಲಾ 113 ರಲ್ಲಿರುವ 'ಬಂದು' ಎಂಬ ಸಮಾಪನಕ್ರಿಯೆಯಲ್ಲಿ ಅನ್ವಯಿಸುತ್ತವೆ.

109. ಅಪರಿಮಿತಾನಕವಾದ್ಯಂ=ಲೆಕ್ಕವಿಲ್ಲದಷ್ಟು ಭೇರಿ ಮೊದಲಾದ ವಾದ್ಯಗಳು. ತಪನದ್ಯುತಿ=ಸೂರ್ಯನ ಬಿಸಿಲು. ಬೆಳುಗೊಡೆ=ಬಿಳಿದು+ಕೊಡೆ. ಭಂಗಿಸೆ=ನಿವಾರಣೆಮಾಡಲು. ಸನ್ನಾಹದ ಪಟ=ಯುದ್ಧಸನ್ನಾಹಕ್ಕಾಗಿ ಹೊಡೆದ ತಂಬಟೆಗಳು. ಪಲವು=ಹಲವು.

110. ವಿಜಯಪತಾಕೆ=ವಿಜಯಧ್ವಜ. ಗಗನ=ಆಕಾಶ. ಗಜಘಟೆ=ಆನೆಯ ಗುಂಪು. ತರಂಗ=ಅಲೆ. ಪಾರದೆ=ಲಕ್ಷ್ಯಮಾಡದೆ, ನೋಡದೆ. ಸೆಂಗಂ=ಅಪಾಯವನ್ನು.

111. ಮಂಗಳಪಾಠಕರ್=ಹೊಗಳುಭಟ್ಟರುಗಳು. ನಲಿಯುತ್ತಿರೆ=ಸಂತೋಷಪಡಿಸುತ್ತಿರಲು, ನಲಿಸುತ್ತಿರಲು. ಕರಕಲಿತಾಯುಧ........ದ್ಯುತಿಗಳ್=ಕೈಯಲ್ಲಿ ಹಿಡಿದ ಕತ್ತಿ ಮೊದ

ಲಾದವುಗಳ ಬಲವಾದ ಕಾಂತಿಗಳು. ಪಿರಿದುಂ=ಹೆಚ್ಚಾಗಿ ಬೆಳಗಲು=ಪ್ರಕಾಶಿಸಲು. ನಿಶಿತ=ಹರಿತವಾದ. ಬದವಿಸು =ಉಂಟುಮಾಡು.

112. ಅದ=ಅದನ್ನು. ಮೋಣಿಸುತಿರೆ=ಅಡ್ಡಗಿಸುತ್ತಿರಲು. ಪಗಲಂ= ಹಗಲನ್ನು, ಸೂರ್ಯನನ್ನು. ದ್ವಿಗುಣಿಸು=ಇಮ್ಮಡಿಮಾಡು, ಎರಡರಷ್ಟುಮಾಡು ಭೂಷಾ=ಆಭರಣ.

113. ಗಮಕಿ=ಚೆನ್ನಾಗಿ ಓದುವವರು. 494 ನೆಯ ಪದ್ಯವನ್ನು ನೋಡು. ಸುಭಾಷಿತ=ಜಾಣತನದ ಮಾತು. ಭುವನಂ= ಲೋಕ. ಸೇನಾಮಯ=ದಂಡಿನಿಂದ ತುಂಬಿದುದು, ಅಚಲ= ಪರ್ವತ, ಪರಿಸರ=ಸಮೀಪ.

114. ಪುದಿದ........ಖಚರನು—ದಿಕ್ಕುಗಳನ್ನೆಲ್ಲಾ ವ್ಯಾಪಿಸಿಕೊಂಡಿದ್ದ ಅಬ್ಧಿಯೆಂಬ ಹೆಸರುಳ್ಳ ಖಚರನು. ಸಮುದ್ರನೆಂಬವನು ಒಬ್ಬ ಖಚರನೆಂದೂ ಅವನನ್ನು ಸಗರನು ಕಟ್ಟಿ ರಾಮನಿಗೆ ಭೃತ್ಯನಾಗಿ ಮಾಡಿದನೆಂದೂ ಜೈನರು ನಂಬುತ್ತಾರೆ. ಎಡೆಗಟ್ಟಲ್=ಎಡೆ+ಕಟ್ಟಲ್, ದಾರಿಯನ್ನು ತಡೆಯಲು ಪ್ರತ್ಯಧಿವಾಸಿಗಳ್=ಸಮುದ್ರವೆಂಬ ಖಚರನ ಪರಿಜನರು. ತಲೆವಾಗಲ್= ತಲೆಯನ್ನು ಬಗ್ಗಿಸಲು, ಅಧೀನರಾಗಲು, ಓಲಗಿಸಲು.

115. ಬೀಡಂ=ಬೀಡನ್ನು, ಪಾಳೆಯವನ್ನು. ಪ್ರಭಾಮಂಡಲ=ಜೈನರ ಪುರಾಣಾನುಸಾರವಾಗಿ ಈತನು ಸೀತಾದೇವಿಗೆ ಸಹೋದರನು. ಉರುತರ=ಹೆಚ್ಚಾದ. ವಿದ್ಯಾ=ವಿದ್ಯೆಯಲ್ಲಿ. ಜನಿತ=ಹುಟ್ಟಿದ. ವಿನೋದರ=ಆಸಕ್ತಿಯುಳ್ಳವನನ್ನು.

116. ಪೆಂಪು=ಹೆಚ್ಚು, ಆಧಿಕ್ಯ; ಹಿರಿದು ಎಂಬುದರ ಭಾವರೂಪ. ನಡೆ=ಚೆನ್ನಾಗಿ. ನಿಜ=ತನ್ನ. ಭುಜಕೆ=ತೋಳಿಗೆ. ಎಡೆಮಾಡು=ಸ್ಥಳಮಾಡು; ಇಲ್ಲಿ ವಶಮಾಡು. ಸುಲಲಿತ=ಮನೋಹರವಾದ. ದಿನಕರ=ಸೂರ್ಯನ ; ವಂಶ=ಕುಲಕ್ಕೆ. ಲಲಾಮಂ=ತಿಲಕದಂತೆ ಇರುವವನು, ಎಂದರೆ ಸೂರ್ಯವಂಶದಲ್ಲಿದ ಶ್ರೇಷ್ಠನು.

## 13. ವಿವಿಧ ನೀತಿಗಳು.

118. ಬಿಡುಗು = ಬಿಡುವುದು.

119. ಸಮಕ್ಷದೊಳು = ಕಣ್ಣೆದುರಿಗೆ, ಆಸನ = ಪೀಠ, ಮಣೆ ಮೊದಲಾದುವು. ಮಹಾಪಾತಕಂ = ಮಹಾ ಪಾಪವು. ನಿಷ್ಕೃತಿ = ಪ್ರಾಯಶ್ಚಿತ್ತ. ಅಘ = ಪಾಪ.

120. ಅಪಹಾಸ್ಯ = ಅಣಕ. ಪ್ರತ್ಯುತ್ತರ = ಇಲ್ಲಿ—ಒರಟೊರಟಾಗಿ ಎದುರು ಮಾತಾಡುವುದು. ಚಿಟುಕು = ಚಿಟಿಕೆ ಹಾಕುವುದು.

121. ಅಟಮಟ = ಕೃತ್ರಿಮ, ಕುಟಿಲ. ಉಸಿರ್ದಪಂ = ಹೇಳಿದವನು; ಧಾ.—ಉಸಿರ್. ಶಿಶುವಧೆ = ಮಕ್ಕಳನ್ನು ಕೊಲ್ಲುವುದು. ದುರ್ಗತಿ = ಕೆಟ್ಟಗತಿ, ನರಕ. ಉತ್ಸಾಹ = ಲವಲವಿಕೆ. ಭಕ್ತಿ = ಪ್ರೀತಿ, ವಿಶ್ವಾಸ. ಅಚ್ಚಳಿಯದೆ = ಸ್ವಲ್ಪವೂ ವ್ಯತ್ಯಾಸವಾಗದೆ, ಮೊನೆಮುರಿಯದೆ. ನಿಚ್ಚಳದ = ನಿಶ್ಚಲವಾದ. ನಿಮಿಷಕ್ಕೆ ಒಂದು ಬಗೆಯಾಗದೆ ದೃಢವಾಗಿರುವ, ಅಚಂಚಲವಾದ. ನಿಷ್ಠೆ = ನಿಯಮ. ದೃಢ = ನೆಲೆಯಾದ ಮನಸ್ಸು. ಕೆಚ್ಚುಗೊಳ್ಳು = ಸಾರವುಳ್ಳದಾಗು. ಕೆಚ್ಚು = ಮರಗಳೊಳಗಡೆ ಇರುವ ಚೇಗಾದ ಭಾಗ.

122. ನಿಯತಮಪ್ಪ = ಗೊತ್ತಾದ. ಆಚಾರಸಮಯ = ನಡತೆಯ ಕಟ್ಟುಪಾಡು. ಮಾತ್ಸರ್ಯ = ಹೊಟ್ಟೆಕಿಚ್ಚು. ಇಂಬುಗೊಡದೆ = ಆಸರೆಕೊಡದೆ. ಇಂಬಾಗಿ = ಹೆಚ್ಚಾಗಿ, ವಿಸ್ತಾರವಾಗಿ.

## 14. ಸಲ್ಲದ ಕಾರ್ಯಗಳು.

123. ಆಶಿಸು = ಇಚ್ಛೈಸು, ಕೋರು. ದಾಸ = ಭಕ್ತ, ಆಳು. ವಿಧವಿಧ ಪಾಶವ = ಹಲವು ಬಗೆಯ ಹಗ್ಗದಂತಿರುವ ಕಟ್ಟುಗಳನ್ನು.

124. ಜೀವಿ = ಜೀವವುಳ್ಳದು, ಪ್ರಾಣಿ. ಘಾಸಿಯುಗೈವುದು = ನೋಯಿಸಿ, ನಲುಗಿಸಿದುದು. ಕಾಶಿ—ಈ ಪುಣ್ಯಕ್ಷೇತ್ರವೆಲ್ಲಿದೆ ?

125. ತೊತ್ತು = ಸುತ್ತು ಕೆಲಸಮಾಡುವ ಆಳು. ಚಿತ್ರದಿ = ವಿಚಿತ್ರವಾಗಿ, ನಾನಾವಿಧವಾಗಿ.

126. ಅನ್ಯಾಯಿ=ಅನ್ಯಾಯವನ್ನು ಮಾಡುವವನು, ದುರುಳ. ಸುಕೃತ=ಪುಣ್ಯ.

127. ನೋಯಲು ನುಡಿವಗೆ=ಇತರರು ನೊಂದುಕೊಳ್ಳುವಂತೆ ಕಠೋರವಾಗಿ ಮಾತನಾಡುವವನಿಗೆ. ಅಪಾಯ=ನೋವು, ಪೀಡೆ, ಬಾಧೆ, ಕಾಯದ ಕಷ್ಟ=ದೇಹಶ್ರಮ, ಮೈಗೆ ಪೆಟ್ಟು.

## 15. ಪಾಪಿಯ ಪಶ್ಚಾತ್ತಾಪ.

128. ದ್ವೇಷಿ=ಇತರರಲ್ಲಿ ದ್ವೇಷವುಳ್ಳವನು, ಎಂದರೆ ಹಗೆಯುಳ್ಳವನು ಮಾನವನು=ಸೃಷ್ಟಿಯಲ್ಲಿ ದೇವಾದಿಗಳಿಗೆ ಕೀಳಾದ ಮನುಷ್ಯರ ಹೊಟ್ಟೆಯಲ್ಲಿ ಹುಟ್ಟಿದವನು. ಭವದಿ=ಸಂಸಾರದಲ್ಲಿ, ಘಾಸಿಯಾದೆನು. ಓಸರಿಸಿ=(ತಲೆಯನ್ನು) ಬಾಗಿ. ಕರುಣ ಬೇಡಿಕೊಂಬೆ=ದಯೆಯನ್ನು ಯಾಚಿಸಿಕೊಳ್ಳುವೆನು.

129. ಇದ್ದೆಸೆ=ಎರಡು+ದೆಸೆ, ಮಾತೃವರ್ಗ ಪಿತೃವರ್ಗದವರು. ಎನ್ನನಾಲ್ದೆಸೆಯು=ನನ್ನ ನಾಲ್ಕು ದಿಕ್ಕುಗಳಲ್ಲಿಯೂ (ಒಬ್ಬರೂ) ಹೊದ್ದರು. ಒದ್ದೆನ್ನ=ಒದ್ದು+ಎನ್ನ; ಒದ್ದು ಎಂಬುದು ತಪ್ಪು; ಒದೆದು ಎಂದರೆ ವ್ಯಾಕರಣರೀತ್ಯಾ ಶುದ್ಧ, ಧಾ.—ಒದೆ.

130. ಓತು=ಪ್ರೀತಿಸಿ. ಧಾ.— ಓ. ಪಾತಕಾಭ್ರ=ಪಾಪವೆಂಬ ಮೇಘ. ಸಂಝೋವಾತ=ಮಳೆಯೊಡನೆ ಬೀಸುವ ಗಾಳಿ. ನನ್ನ ಪಾಪವೆಂಬ ಮೇಘಕ್ಕೆ ಗಾಳಿಯಾಗು, ಎಂದರೆ ಪಾಪವನ್ನು ತೊಲಗಿಸು ಎಂದು ತಾತ್ಪರ್ಯ.

## 16. ರಾಮಲಕ್ಷ್ಮಣರ ವನವಾಸ.

131. ತರು+ಚಯ=ಮರಗಳ ಗುಂಪು. ಬಿಡುವ=ತಂಗುವ, ಬೀಡುಬಿಡುವ. ಬಸರಿಸು=ಉಂಟುಮಾಡು. ಅಳಲು=ದುಃಖ ಅವನಿ+ಜೆ=ಭೂಮಿಜೆ.

132. ತೊಳಗ=ತೊಳಗುವ, ಪ್ರಕಾಶಿಸುವ. ಪಳುಕು=ಸ್ಫಟಿಕ. ಪಾದಶಿಲೆ=ಕಾಯ್ದುಶಿಲೆ ಎಂದಿರಬಹುದು. ನಡೆಯುತ+ಅಂದ್ಗಳ

+ಅಲಘುತರ+ತಪನ+ತಾಪದಿ — ಅಲಘುತರ=ಲಘುತರವಲ್ಲದ, ಬಲು, ಹೆಚ್ಚಾದ; ತಪನ=ಸೂರ್ಯನ ತಾಪದಿ=ಸೆಕೆಯಿಂದ, ಝಳದಿಂದ. ಲತಾಂಗಿ=ಬಳ್ಳಿಯೋಪಾದಿಯಲ್ಲಿರುವ ಮೈಯುಳ್ಳವಳು. ಬಳಿವಳಿಯ=ಎಡೆಬಿಡದೆ ಪಕ್ಕದಲ್ಲಿ ಬರುವ.

133. ಕೆನ್ದಳಿರು=ಕೆಂಪಾದ ಚಿಗುರು. ಕೆಂದಳ್=ಕೆಂಪಾದ ಅಂಗಾಲು. ಪಡಿಯಿಡು=ಸರಿಹೋಲಿಸು, ಇರಿಸು. ಲಕ್ಷ್ಮೀವರ=ಲಕ್ಷ್ಮಿಗೆ ಪತಿಯಾದವನು. ಪಸರಿಸುತಿರಲು=ಹರಡುತ್ತಿರಲು.

134. ಮುಖವೆಂಬ, ಶಶಿ=ಚಂದ್ರನ, ಸುಧಾರಸ=ಅಮೃತರಸದ. ಪಿಸರ=ಸಮೂಹ. ಬಿಂದು=ಹನಿ. ನಸು=ಸ್ವಲ್ಪ. ಅಸದಳಂ=ಹೆಚ್ಚಾಗಿ; ಕೈಮೀರಿ. ಅಸಿಯಳು=ತೆಳ್ಳನಾದವಳು, ಕೃಶಾಂಗಿ.

135. ತೃಷೆ=ಬಾಯಾರಿಕೆ. ದೆಸೆಯನರಿಯಂ=ಅವುಗಳಿರುವ ದಿಕ್ಕನ್ನು ಕೂಡ ಅರಿಯದವನು, ಎಂದರೆ ಹಸಿವು ಮೊದಲಾದುವನ್ನು ಮರೆತು ಲಕ್ಷ್ಮಣನು ಸೀತಾರಾಮರಿಗಾಗಿ ನೀರನ್ನೂ ನೆಳಲನ್ನೂ ಹುಡುಕುತ್ತಿದ್ದನು ಎಂದು ಭಾವ. ಅಸುಗೆದಳಿರು=ಅಸುಗೆ+ತಳಿರು, ಅಶೋಕದ ಚಿಗುರು ಶಯನೀಯ—ಹಾಸಿಗೆ, ಮಿಸುಪ=ಮಿಸುಗುವ, ಉಕ್ಕುತ್ತಿರುವ.

136. ತುಂಗ=ದೊಡ್ಡದಾದ ಸಾರ್ವರ್ತುಕ=ಎಲ್ಲಾ ಋತುಗಳಲ್ಲಿಯೂ ಪುಷ್ಪಫಲಾದಿಗಳನ್ನು ಪಡೆದಿರುವ. ಸರಿತ್=ನದಿ. ಸರೋವರ=ಕೊಳ. ರಂಗತ್=ಮನೋಹರವಾದ, ವಿಶಾಲವಾದ. ಕೂಟಂಗಳ=ಪರ್ವತ ಶಿಖರಗಳ. ಮನಂಗೊಳಿಪ=ಮನೋಹರವಾದ. ಚಿತ್ರಕೂಟವ=ಚಿತ್ರಕೂಟವೆಂಬ ಪರ್ವತವನ್ನು.

137. ಬಲಕಿಕ್ಕಿ ಕಳೆದು=ಬಲಗಡೆಗೆ ಬಿಟ್ಟುಕೊಂಡು ನಡೆದು, ಎಂದರೆ ಅದರ ಎಡಗಡೆಯಲ್ಲಿ ಹೋಗಿ, ಶ್ರೀಗೆ=ಲಕ್ಷ್ಮಿಗೆ, ಸಂಪತ್ತಿಗೆ, ವಟಪಿಟಪಿ ಪೂಗಕ್ಕೆ=ವಟವೃಕ್ಷಗಳ ತೋಪಿಗೆ, ಎಂದರೆ ಪಂಚವಟಿಯೆಂಬಲ್ಲಿಗೆ.

## 17. ತಿರುಕನ ಸ್ವಪ್ನ.

138. ತಿರುಕ=ತಿರಿ+ಉಕ; ತಿರಿವವನು, ಭಿಕ್ಷುಕ, ಯಾಚಕ. ಹೀಗೆಯೇ ಕುಡುಕ, ಮುರುಕ, ಬಡಿಕ, ಇತ್ಯಾದಿ. ಧರ್ಮಶಾಲೆ—ಪರಸ್ಥಳದವರೂ ಬಡವರೂ ಇಳಿದುಕೊಳ್ಳುವುದಕ್ಕಾಗಿ ಧರ್ಮಾರ್ಥವಾಗಿ ಕಟ್ಟಿದ ಮನೆ. ಬರಗು=ಮಲಗು; ಅರ್ಥಾಂತರ—ಸತ್ತುಹೋಗು.

139. ತೊಡರಿಸು=ಸೇರಿಸು; ಇಲ್ಲಿ-ಹಾಕು. ಪಟ್ಟ=ಸಿಂಹಾಸನ, ರಾಜ್ಯ. ಪೊಡವಿಯಾಣ್ಮ=ದೊರೆ, ಪೃಥಿವೀಶ.

140. ಭಟ್ಟನಿ=ರಾಜನ ಸಾಮಾನ್ಯಪತ್ನಿ (ಪಟ್ಟಾಭಿಷಿಕ್ತಳಾದ ಪತ್ನಿಗೆ ಮಹಿಷಿ, ದೇವಿ ಎಂದು ಹೆಸರು). ನಲ್ಲ=ಪತಿ.

141. ಚಾತುರಂಗಬಲ=ಆನೆ, ಕುದುರೆ, ತೇರು, ಕಾಲಾಳು ಎಂಬ ನಾಲ್ಕು ಅವಯವವುಳ್ಳ ದಳ, ಫೌಜು, ಲೋಲನಾಗಿ=ಪ್ರೀತನಾಗಿ, ಇನಿತು=ಇಷ್ಟು. ಸುತರು=ಪುತ್ರರು.

142. ಜೀಯ=ಸ್ವಾಮಿ. ಗಾಢವಾಗೆ=ಗಾಢವಾಗಲು, ಸಾಂದ್ರವಾಗಲು, ದಟವಾಗಲು, ಹೆಚ್ಚಾಗಲು, ಅಖಿಲ=ಎಲ್ಲಾ. ರಾಯ=ತ್ಸ.—ರಾಜ.

143. ಮದ=ಇಲ್ಲಿ-ಕೊಬ್ಬು. ವನಿತೆ=ಹೆಂಗಸು; ಇಲ್ಲಿ-ಹೆಂಡತಿ.

144. ಮರುಳನಂತೆ=ಹುಚ್ಚನ ಹಾಗೆ. ಭೋಗ=ಸುಖ. ಪರವ=ಪರಲೋಕವನ್ನು.

## 18. ವಿಭೀಷಣ ರಾವಣಾದಿ ಸಂವಾದ.

145. ಅನುಕೂಲಬಡದೆ=ಒಳಗಾಗದೆ; ಅನು+ಕೂಲ+ಪಡದೆ; ಅವಯವಾರ್ಥ—ಕೂಲವನ್ನು=ದಡವನ್ನು, ಅನುಸರಿಸಿ=ಮೀರದೆ. ಛಡಾಳಿಸು=ಮಿತಿಮೀರು. ಮುರಿಮೀಸೆ=ವಕ್ರವಾದ ಮೀಸೆ. ಕೀಲಿ–ಕೀಲ ಎಂದರೆ ಜ್ವಾಲೆ, ಉರಿ, ಅದನ್ನುಳ್ಳುದು=ಬೆಂಕಿ. ಕಿಡಿಮಸಗು=ಕಿಡಿಗಳು ಹೆಚ್ಚಲು. ವಿಲಯದ=ಪ್ರಳಯಕಾಲದ. ಕಾಲಭೈರವ=ಪ್ರಳಯಕಾಲದ

ರುವ್ರು. ಸುತ್ತಿನ=ಸುತ್ತಲೂ ಇದ್ದ. ಖೂಳ=ದುಷ್ಟ, ನೀಚ. ದನುಜ—ರಾಕ್ಷಸ; ದನು+ಜ=ದನು ಎಂಬವಳಲ್ಲಿ ಹುಟ್ಟಿದವರು.

146. ಗಜಬಜ+ಇದು+ಏಕೆ. ಗಜಬಜ=ಕೋಲಾಹಲ, ಕೂಗಾಟ. ಮಾಮಾಸಾಹಸಿಗಳು=ಮಹಾಮಹಾ ಸಾಹಸವುಳ್ಳವರು. ಕರ್ಮಧಾರಯಸಮಾಸದಲ್ಲಿ 'ಮಹತ್' ಶಬ್ದಕ್ಕೆ ಆದೇಶವಾಗಿ ಬರುವ 'ಮಹಾ' ಎಂಬುದು ಕನ್ನಡದಲ್ಲಿ 'ಮಾ' ಎಂದಾಗುತ್ತದೆ; ಪ್ರಯೋಗ—ಮಹಾನವಮಿ—ಮಾನೌಮಿ. ಅಹುದು=ಹೊಸಗನ್ನಡರೂಪ—ಹೌದು. ಬೇಹು=ದೂತ, ಗೂಢಚಾರ. ಅನಲ=ಅಗ್ನಿ, ಬೆಂಕಿ. ಉರುಹಿ=ಸುಟ್ಟು. ಬಾಹು=ತೋಳು.

147. ವಧೆ=ಕೊಲೆ. ತೆತ್ತಿಹರೆ=ತೆತ್ತು+ಇಹರೆ, ಕೊಟ್ಟಿರುವರೆ; ಧಾ—ತೆರು. ಲಂಘಿಸು=ಹಾರು. ಘನಯೋಚನೆ=ದೊಡ್ಡ ಆಲೋಚನೆ.

148. ಸಾಗರ=ಸಮುದ್ರ; ಸಗರನೆಂಬ ರಾಜನ ಮಕ್ಕಳು ಕಳವು ಹೋದ ಯಜ್ಞದ ಕುದುರೆಯನ್ನು ಹುಡುಕುವುದಕ್ಕಾಗಿ ಅಗೆದ ಹಳ್ಳದಲ್ಲಿ ನೀರು ತುಂಬಿಕೊಂಡು ಸಮುದ್ರವಾದುದರಿಂದ ಅದಕ್ಕೆ ಸಾಗರವೆಂಬ ಹೆಸರುಂಟಾಯಿತೆಂದು ಪುರಾಣಕಥೆ. ದಾಂಟು=ದಾಟು. ಮುನ್ನ=ಮುಂಚೆ; ಇದಕ್ಕೆ 'ಮುಂಚೆ' ಎಂಬ ರೂಪವೂ ಉಂಟು. ವಾನರ=ಕಪಿ, ಪತಾಕಿಸಿ—ಪತಾಕ=ಧ್ವಜ, ಅದನ್ನು ಉಳ್ಳುದು=ಸೇನೆ. ಕೆರಳಿ=ಕೋಪಿಸಿಕೊಂಡು. ಅಂಬು=ಬಾಣ; ಅರ್ಥಾಂತರ—ನೀರು. ರಾತ್ರಿಂಚರ=ರಾತ್ರಿಯಲ್ಲಿ ಸುಳಿವವರು. ರಾಕ್ಷಸರು. ಹಳಚು=ಹೊಡೆ; ಇಲ್ಲಿ—ಸಂಹರಿಸು ಹಳಗನ್ನಡ—ಪಳಂಚು.

149. ಬಿದ್ದು=ನಿದೆ ಮಾಡುತ್ತಿದ್ದ. ಮರಣ=ಸಾವು. ಇನಕುಲೇಂದ್ರ=ಸೂರ್ಯವಂಶದಲ್ಲಿ ಶ್ರೇಷ್ಠನು. ಪಾದಪದುಮ=ತಾವರೆಯಂತಿರುವ ಪಾದಗಳು.

150. ಅಸುರ = ರಾಕ್ಷಸ ; ಅ + ಸುರ = ದೇವನಲ್ಲದವನು, ಸುರರಿಗೆ ವಿರೋಧಿಯಾದವನು. ಮೌಳಿ = ತಲೆ. ಕಾಳಪನ್ನಗ = ಕರಿಯಹಾವು, ಕಾಳಿಂಗನಾಗರ ; ಪನ್ನಗ = ಪತ್ + ನ + ಗ = ಕಾಲಿನಿಂದ ನಡೆಯದ ಪ್ರಾಣಿ. ಕಂಠಬದ್ಧ = ಕೊರಳಲ್ಲಿ ಕಟ್ಟಿದ. ಯಮಪಾಶ = ಮೃತ್ಯುವಿನ ಕುಣಿಕೆ. ಮಹೀಸುತೆ = ಸೀತೆ ; ಹೇಗೆ ?

151 ವಿಗ್ರಹ = ಯುದ್ಧ ; ಅರ್ಥಾಂತರ—ಮೈ, ದೇವತಾಮೂರ್ತಿ ಪ್ರತಿಭಟಿಸು = ಎದುರು ನಿಲ್ಲು. ಅಗ್ರಗಣ್ಯ = ಅಗ್ರ + ಗಣ್ಯ, ಮೊದಲಿನಲ್ಲಿ ಲೆಕ್ಕಿಸಲ್ಪಡುವವನು, ಮುಂದಾಳು. ಶರಾಗ್ರ = ಶರ + ಅಗ್ರ = ಬಾಣದ ಮೊನೆ; ಶರ—ಅರ್ಥಾಂತರವೇನು?. ತ್ರಿಭುವನ = ತ್ರಿ + ಭುವನ = ಸ್ವರ್ಗ, ಮರ್ತ್ಯ, ಪಾತಳ, ಎಂಬ ಮೂರು ಲೋಕಗಳು. ಕಮಲಭವ = ಕಮಲದಲ್ಲಿ ಹುಟ್ಟಿದವನು, ಬ್ರಹ್ಮ ; ವಿಷ್ಣುವಿನ ಹೊಕ್ಕುಳ ತಾವರೆಯಲ್ಲಿ ಬ್ರಹ್ಮನು ಹುಟ್ಟಿದುದಾಗಿ ಪುರಾಣಪ್ರೋಕ್ತವಾಗಿರುವುದರಿಂದ ಅವನಿಗೆ ಈ ಹೆಸರು ಬಂದಿದೆ. ಸಮಗ್ರ—ಸಮೂಹ. ಮರೆ + ಪುಗಲು = ಮರೆಬೀಳಲು, ಪರಿಗ್ರಹಿಪನು = ಕೈಕೊಳ್ಳುವವನು.

152. ಮದಾಂಧ = ಕೊಬ್ಬಿನಿಂದ ಮುಂಗಾಣದ. ಪ್ರಮುಖನಾಯಕರು = ಮೊದಲಾದ ಶೂರರು. ಗರಿ = ಬಾಣವು ನೇರವಾಗಿ ಹೋಗುವುದಕ್ಕಾಗಿ ಅದರ ಪಕ್ಕಗಳಿಗೆ ಸೇರಿಸಿರುವ ಗರಿಗಳು. ಸೀಮೆ = ಎಲ್ಲೆ ; ಸಾಮಾನ್ಯವಾಗಿ ದೇಶ. ಅಮ್ಮರು—ಹಳಗನ್ನಡ—ಅಣ್ಮರು = ಸಮರ್ಥರಾಗುವುದಿಲ್ಲ ಭ್ರಾಮಕರ = ಬುದ್ಧಿ ಭ್ರಮೆಯನ್ನು ಎಂದರೆ ಕಳವಳವನ್ನು ಉಂಟುಮಾಡುವವರ. ತೃಣವಿಡಿದು = ತೃಣ + ಹಿಡಿದು = ಹುಲ್ಲನ್ನು ಹಿಡಿದುಕೊಂಡು ; ತಾನು ಹೇಳುವಮಾತು ನಿಶ್ಚಯವೆಂದು ದೃಢಪಡಿಸುವುದಕ್ಕೋಸ್ಕರ ಹುಲ್ಲು ಅಥವಾ ಕಡ್ಡಿಯನ್ನು ಕೈಯಲ್ಲಿ ಹಿಡಿದುಕೊಂಡು ಹೇಳುವ ಪದ್ಧತಿಯುಂಟು.

153. ಸುರಪಜಿತು—ಯಾರು ? ಪೊರೆಯುಗಿದ = ಪರೆಯನ್ನು ಸುಲಿದ. ಉರಗ = ಹಾವು. ಬಲುಹು—ಹಳಗನ್ನಡ—ಬಲ್ಪು = ಶಕ್ತಿ. ಪರ = ಅನ್ಯ, ಶತ್ರು. ಜಿಹ್ವೆ = ನಾಲಗೆ.

154. ಶಮನ = ಯಮ. ಈ ಪದ್ಯದ ಪೂರ್ವಾರ್ಧದಲ್ಲಿ ಅಷ್ಟದಿಕ್ಪಾಲಕರ ಹೆಸರುಗಳು ಕ್ರಮವಾಗಿವೆ. ಮೃಡ = ಈಶ್ವರ. ಕಡುಗಲಿ—ಕಡಿದು+ಕಲಿ = ಮಹಾಶೂರ.

155. ಗೆಲಿದ–ಹಳಗನ್ನಡ–ಗೆಲ್ದ=ಗೆದ್ದ ದಿಗ್ಪಾಲಕರು–ತ್ಸ.—ದಿಕ್ಪಾಲಕರು. ಅಡಿದಾವರೆ—ಇದಕ್ಕೆ ಸರಿಯಾದ ಸಂಸ್ಕೃತಪದವೇನು ? ಸೇವಕ = ಊಳಿಗದವನು. ಮೃಗರಾಜ = ಸಿಂಹ; ಅಗ್ಗಳಿಕೆ = ಹೆಚ್ಚಿಗೆ. ಜಂಬುಕ = ನರಿ. ಸಾರು = ಹೋಗು. ಅರ್ಥಾಂತರ—ಡಂಗುರ ಹಾಕು, ಬೇರಿ ಮೊದಲಾದುವುಗಳ ಕಟ್ಟು. ಅಲಘುಮತಿ = ದೊಡ್ಡಬುದ್ಧಿಯುಳ್ಳವನು ; ಹರಿಶರಣ = ಹರಿಯೇ ಶರಣ, ರಕ್ಷಕನೆಂಬ ನಂಬಿಕೆಯುಳ್ಳವನು. ಇಲ್ಲಿ—ವಿಭೀಷಣ.

156. ಬಿಡಯ = ದಾಕ್ಷಿಣ್ಯ. ಈಕ್ಷಿಸು = ನೋಡು. ಫಡಫಡ = ಛೆ, ಛೆ. ಕಡುಗ—ತ್ಸ.—ಖಡ್ಗ = ಕತ್ತಿ. ಜಡಿದು = ಜಳಪಿಸಿ. ಗದ್ದುಗೆ = ಸಿಂಹಾಸನ. ತೊಡರು = ಬಿರುದಿನ ಬಳೆ. ಬದ್ದು—ಇದು. ಬದೆದು ಎಂದಿರಬೇಕು. ಕಂಪಿಸು = ನಡುಗು

157. ಸಚಿವ = ಮಂತ್ರಿ. ರುಜೆ = ರೋಗ. ಮತ್ಸರ = ಹೊಟ್ಟೆಗಿಚ್ಚು.

158. ಆಹ್ವಯದ = ಹೆಸರುಗಳುಳ್ಳ. ಕನಲಿ = ಕೋಪಿಸಿಕೊಂಡು. ಆಗ್ರಹ = ಕೋಪ.

159. ದುರ್ಗ = ದುರ್+ಗ ; ಶತ್ರುಗಳು ಪ್ರವೇಶಿಸುವುದಕ್ಕೆ ಅಸಾಧ್ಯವಾದ ಕೋಟೆಯೇ ಮೊದಲಾದುವುಗಳು. ತವ = ನಿನ್ನ ; ಹೀಗೆ ಷಟ್ಪದಿಯಲ್ಲಿ ಸಂಸ್ಕೃತ ಸರ್ವನಾಮಗಳ ಷಷ್ಠ್ಯಂತ ರೂಪವನ್ನು ಪ್ರಯೋಗಿಸುವುದುಂಟು. ಸಗೋತ್ರರು = ಒಂದೇ ಗೋತ್ರದವರು, ದಾಯಾದಿಗಳು. ಬಾಂಧವರು = ನಂಟರು. ಕೋಟಿ = ಅಗ್ರ, ಮೊನೆ.

## ೧೯. ಮಾಯಾದೇವಿಯ ಬಾಲ್ಯವರ್ಣನೆ.

160. ಅವನೀಕಾಂತೆ ಎಂದರೇನು ? ಶೃಂಗಾರಸಾರ = ಚೆಲುವಿನ ಸಾರ. ||ಸದನ = ಮನೆ. ಸುಪ್ರಾಣ = ಸರಿಯಾದ ರೂಪ ಸುಮ್ಮಾನ = ಸಂತೋಷ. ನೆಲೆಬೀಡು = ನೆಲೆಯಾದ ಸಳ, ಸುದತಿ = ಸೊಗಸಾದ ಹಲ್ಲುಗಳುಳ್ಳವಳು, ಹೆಂಗಸು. ಬನವಸಿ — ಇದಕ್ಕೆ ಬನವಾಸಿ ಎಂದೂ ಹೆಸರುಂಟು, ಇದು ಶಿಕಾರಿಪುರಕ್ಕೆ ಸಮೀಪದಲ್ಲಿದೆ.

161. ಈವುತಿಹ = ಈ + ಉತೆ + ಇಹ ; ಇದು ಸಾಮಾನ್ಯವಾಗಿ ಈಯುತಿಹ ಎಂದು ಪ್ರಯೋಗಿಸಲ್ಪಡುತ್ತದೆ. ದಾಡಿಮ = ದಾಳಿಂಬ. ನಾರಂಗ = ಮಾದಲ.

162. ಸಾರಣೆ = ಸಾರಿಸುವಿಕೆ. ಕಾರಣೆ = ಗೋಡೆಯ ಸುತ್ತಲೂ ಕೆಳಗಡೆಯಲ್ಲಿ ಕೆಂಪಗೆ ಎಳೆವ ಕಾವಿಯ ಗೆರೆ. ಗಂಧೋದಕ = ಚಂದನದ ನೀರು. ಚಳೆಯ = ಚಿಮುಕಿಸುವುದು. ಸೌರಭ = ವಾಸನೆ. ಪೂವಲಿ — ದ್ಭ. — ಪುಷ್ಪ ಬಲಿ, ರಂಗವಲಿ. ಸಮನಿಸಿದುದು = ಉಂಟಾಯಿತು.

163. ಕೈವಾರಿಸು = ಹೊಗಳು ; ಭಾವರೂಪ — ಕೈವಾರ. ವಿಗಡ — ತ್ಸ. — ವಿಕಟ = ಹೆಚ್ಚಾದ. ತತಿ = ಗುಂಪು. ಬೃಂಹಿತ = ಆನೆಯ ಕೂಗು. ಕಳಕಳತೆವೆತ್ತಿಪುದು = ಕೋಲಾಹಲವನ್ನು ಹೊಂದಿರುವುದು.

164. ಸಕಲ ಬುದ್ಧಿಯನ್ನು ನುಡಿದು (= ಹೇಳಿದುದರಿಂದ) ಜಾಣರು ಎಂದನ್ವಯ. ಹೀಗೆಯೇ ಉಳಿದ ವಾಕ್ಯಗಳನ್ನೂ ಅನ್ವಯಿಸು. ಅರ್ಥಿಗೆ = ಯಾಚಕನಿಗೆ ; ಅರ್ಥ = ಧನ. ಜನಪದ = ದೇಶ. ಕಿಕ್ಕಿರಿ = ತುಂಬಿಕೊಂಡಿರು.

165. ಬಣ್ಣಿಸು = ವರ್ಣಿಸಲು. ಪ್ರತಾಪ = ತೇಜಸ್ಸು, ಪರಾಕ್ರಮ ಶೂರತೆ = ಶೌರ್ಯ. ಧಾರಿಣಿ = ಭೂಮಿ. ಅಪ್ರತಿಮ = ಸಾಟಿ ಇಲ್ಲದವನು. ಉದಾರತೆ = ಔದಾರ್ಯ. ನಾರಿ = ಹೆಂಗಸು ; ಇಲ್ಲಿ — ಹೆಂಡತಿ ; ಅರ್ಥಾಂತರ — ಬಿಲ್ಲಿನ ಹಗ್ಗ. ಮಾನಿನಿ = ಹೆಂಗಸು.

166. ದೇವಿ=ರಾಜಪತ್ನಿ. ರಾಜೀವಲೋಚನೆ=ಕಮಲದಂತೆ ಸೊಗಸಾದ ಕಣ್ಣುಳ್ಳವಳು. ರಚಿತಗಂಜನೆ=ಮಾಡಿದ ಅಲಂಕಾರವುಳ್ಳವಳು. ಸಕಲಸಂಪನ್ನೆ—ಸಕಲ ಸಂಪತ್ತೂ ಉಳ್ಳವಳು. ದಾನವ=ರಾಕ್ಷಸ. ಮಾನವ=ಮನುಷ್ಯ. ದಾವಣಿಯ ದನ—ನೆಲದಲ್ಲಿ ನಟ್ಟಿರುವ ಎರಡು ಗೂಟಗಳಿಗೆ ಬಿಗಿದ ಹಗ್ಗಕ್ಕೆ ಕಟ್ಟಿದ ಹಸುಗಳಿಗೆ 'ದಾವಣಿಯ ದನ' ವೆಂದು ಹೆಸರು. ಭಾವೆ=ಹೆಂಗಸು, ತ್ಸ=ಭಾಮಾ.

167. ಗಾತ್ರ=ಮೈ. ವ್ಯಾಮೋಹವೆಂಬ, ನವ=ನೂತನವಾದ ರಸದಿಂದ ಭರಿತ=ತುಂಬಿರುವ. ಪಾತ್ರೆಯಂತಿರುವವಳನ್ನು ಬುಧರು=ವಿದ್ವಾಂಸರು.

168. ಸಿಸು—ತ್ಸ.—ಶಿಶು=ಮಗು. ಜನನಿ=ತಾಯಿ. ಜನಕ=ತಂದೆ. ವಸುಮತೀಪತಿ=ಭೂಪತಿ, ರಾಜ. ಆತ್ಮಜೆ=ಮಗಳು. ನವೀನ=ಹೊಸದಾದ. ನಾಮ=ಹೆಸರು.

169. ಲುಲಿಯ=ಪ್ರಕಾಶವುಳ್ಳ, ತಳತಳಿಸುವ. ಸುಡಾಳ=ಬಿಳಿ. ಯ ಕಾಂತಿ; ಹೀಗೆ ಕನ್ನಡ ಶಬ್ದಗಳ ಹಿಂದೆ 'ಸು' ಎಂಬುದನ್ನು ಸೇರಿಸುವುದು ಅಪೂರ್ವ. ಒಲೆವ=ತೂಗಾಡುವ ಬಾಲದೊಡಿಗೆ=ಮಕ್ಕಳಿಗೆ ಇಡುವ ಒಡವೆಗಳು.

170. ಬೆಚ್ಚುನೀರು=ಹುಟ್ಟಿದಕೂಡಲೆ ಮಗುವಿನ ಮೇಲೆ ಚಿಮುಕಿಸುವ ತಣ್ಣೀರು. ಬಚ್ಚೆರಗು=ಬಂದು+ಸೆರಗು, ಬರ್+ಸೆರಗು. ಸೊಡರಕ್ಕಿಯಲಿ=ದೀಪದ ಬತ್ತಿ ಕೊನೆಯ ಕರಿಕಿನಿಂದ. ನಿಚ್ಚ=ನಿತ್ಯ, ತೂಪಿರಿದು=ಬಾಯಿತುಂಬ ಗಾಳಿಯನ್ನು ತುಂಬಿಕೊಂಡು ಸದ್ದಾಗುವ ಹಾಗೆ ಊದುತ್ತ ಅಳುವ ಮಕ್ಕಳನ್ನು ಸಮಾಧಾನಮಾಡಿ. ನಚ್ಚುಮೆಚ್ಚಿನ=ಅಪ್ಪರಾಗಿರುವ; ಈಗ ಇದನ್ನೇ 'ಅಚ್ಚುಮೆಚ್ಚಾಗಿರುವ' ಎನ್ನುತ್ತಾರೆ. ದಾದಿ=ತ್ಸ.—ಧಾತ್ರಿ.

171. ಮಾರ್ಪೊಳೆವ=ಪ್ರತಿಫಲಿಸುವ. ಕೈದುಡುಕಿ=ಕೈ+ತುಡಕಿ ಕೈಯನು ನೀಡಿ ಹಿಡಿದುಕೊಂಡು. ಆಲಿಪ=ಕೇಳುವ, ಆಲಿಸುವ.

172. ತನ್ನುವನು=ತನ್ನನ್ನೂ; ಹಳಗನ್ನಡ— ತನ್ನುವಂ. ತಂಡ=ಗುಂಪು. ಹೊರಹೊಮ್ಮಿಸು=ಹೊರಗಡೆಗೆ ಹೊಮ್ಮಿ ಕೊಂಡು ಬರುವಂತೆ ಮಾಡು. ಸೊಮ್ಮು=ಸೊಮ್ಮನ್ನು, ಸಂಪತ್ತನ್ನು.

173. ಸಕಲ ಚೆಲುವು=ಅರಿಮಾಸ. ಜಂಗುಳಿ=ಗುಂಪು. ಕಳೆ ಯೇರು=ಕಾಂತಿ ಹೆಚ್ಚು, ಹೆಚ್ಚಾದ ಕಾಂತಿಯನ್ನು ಪಡೆ. ವಿವಿಧ=ನಾನಾ ವಿಧವಾದ. ವಿಲಾಸ=ಬೆಡಗುಗಳ. ವೃತ್ತಿ ಯಲ್ಲಿ=ವ್ಯಾಪಾರದಿಂದ.

174. ಶಿಕ್ಷಾಚಾರ್ಯತನದಲಿ=ಕಲಿಸಿಕೊಡುವ ಗುರುವಿನ ಹಾಗೆ. ಸರಪಿಡಲು=ಸ್ವರವನ್ನು ಮಾಡಲು ಧ್ವನಿಮಾಡಲು.

## ೨೦. ನಳರಾಯನೂ ಕರ್ಕೋಟಕನು.

(ನಳರಾಯನ ಕಥೆಯು ಕಥಾಸಂಗ್ರಹದಲ್ಲಿ ವಿಸ್ತಾರವಾಗಿ ಬರೆದಿದೆ.)

175. ಕುಂತೀತನಯ=ಕುಂತಿಯ ಮಗನಾದ ಧರ್ಮರಾಜ. ಧರ್ಮ ರಾಜನು ತನ್ನಂತೆ ಯಾರೂ ಕಷ್ಟವನ್ನು ಅನುಭವಿಸಿದವರು ಇಲ್ಲವೆಂದು ಚಿಂತಿಸುತ್ತಿರಲು ನಳನ ಕಥೆಯನ್ನು ಹೇಳಿ ಆತ ನಿಗೆ ದುಃಖೋಪಶಮನಮಾಡಿದುದಾಗಿ ಮಹಾಭಾರತದಲ್ಲಿ ಹೇಳಿದೆ. ನಿಷಧನೃಪಾಲ=ನಿಷಧರಾಜ್ಯಕ್ಕೆ ಧೊರೆಯಾದ ನಳ. ಆಶ್ರಯ=ಸ್ಥಳ.

176. ಅಧೈರ್ಯ=ಭಯ. ವಿಧಿ=ದೈವ, ಅದೃಷ್ಟ. ಕಂಬನಿ=ಕಣ್ಣನಿ, ಕಣ್ಣನೀರು. ಬಿಸುಸುಯ್ದು=ಬೆಚ್ಚಗೆ ಉಸಿರುಬಿಟ್ಟನು; ದುಃಖಕಾಲದಲ್ಲಿ ಉಸಿರು ಬೆಚ್ಚಗಾಗುತ್ತದೆ.

177. ಪರರ+ಎಡೆಗೆ+ಇತ್ತು=ಪರರ ವಶದಲ್ಲಿ ಬಿಟ್ಟು. ಮತಿಪಿ ಕಳ=ತಿಳಿಗೇಡಿ. ಪುರಾ=ಪೂರ್ವದಲ್ಲಿ, ಹಿಂದಿನ ಜನ್ಮ ದಲ್ಲಿ. ಐಸೆ=ಅಲ್ಲವೆ. ಬಾಹಿರರು=ಧರ್ಮಕ್ಕೆ ಹೊರಗಾದ ವರು, ಧರ್ಮ ಮಾರ್ಗವನ್ನು ಬಿಟ್ಟವರು.

178. ಆರನೊಲ್ಲದೆ=ಯಾರನ್ನೂ ಬಪ್ಪದೆ. ಪಾತಕನು=ಪಾಪಿಷ್ಠನು.

179 ಪರಿ=ರೀತಿ. ಪ್ರಲಾಪಿಸು=ಗೋಳಿಡು. ಶ್ರೀಪತಿ=ಲಕ್ಷ್ಮೀಪತಿ, ಹರಿ. ಹುತವಹ=ಅಗ್ನಿ.

180. ಹೆಬ್ಬಿದಿರು=ಹಿರಿದು+ಬಿದಿರು. ಕದಳಿ=ಬಾಳೆ. ಮೆಳೆ=ಒತ್ತೊತ್ತಾಗಿ ಪೊದರಾಗಿ ಬೆಳೆದಿರುವ ಬಿದಿರ ಹಿಂಡಿಲು. ಗದಗದಿಸಿ=ನಡುನಡುಗಿ. ಗುಹೆ=ಗವಿ. ಹಾಯ್ದುವು=ನುಗ್ಗಿದವು. ಸಂಕುಲ=ಗುಂಪು. ಮುದುರಿದವು—ಇಲ್ಲಿ—ಸತ್ತುಹೋದುವು.

181. ಶಾರ್ದೂಲ=ಹುಲಿ. ಅಗಣಿತ=ಲೆಕ್ಕವಿಲ್ಲದಷ್ಟು. ಚಿಗಿದು=ನೆಗೆದು. ಗಂಡಬೇರುಂಡ=ಎರಡು ತಲೆಯ ಹಕ್ಕಿ; ಇದರ ಚಿತ್ರವನ್ನು ಮೈಸೂರು ಮಹಾರಾಜರವರ ಧ್ವಜಪಟದಲ್ಲಿ ನೋಡಬಹುದು. ಕೆಡೆದುವು=ಬಿದ್ದುವು.

182. ಬಡಬಾನಲ=ಬಡಬಾ ಎಂಬ ಕುದುರೆಯ ಮುಖದಲ್ಲಿರುವ ಬೆಂಕಿ; ಇದು ಸಮುದ್ರದಲ್ಲಿದ್ದುಕೊಂಡು ಸಮುದ್ರದ ನೀರು ಉಕ್ಕದಂತೆ ಕುಡಿದುಬಿಡುವುದಾಗಿ ಪುರಾಣಕಥೆ. ಪಾವಕ=ಅಗ್ನಿ. ಶಿರೋಮಣಿ=ತಲೆಯಲ್ಲಿ ಧರಿಸುವ ಚೂಡಾರತ್ನ.

183. ಅಸು=ಪ್ರಾಣ ಷಡಾಗಮಜ್ಞ=ಷಟ್+ಆಗಮ+ಜ=ಆರು ಆಗಮಗಳನ್ನು ತಿಳಿದವನು, ಪಂಡಿತ; ನ್ಯಾಯ, ಸಾಂಖ್ಯ, ವೈಶೇಷಿಕ, ಯೋಗ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ ಎಂಬ ಆರು ಶಾಸ್ತ್ರಗಳನ್ನೂ ತಿಳಿದವನು. ಭೋಗಿ ಭೋಗ, ಹೆಡೆ ಉಳ್ಳದು, ಸರ್ಪ, ಅರ್ಥಾಂತರ—ಸುಖಿ.

184. ಖಾತಿ=ಕೋಪ. ಕರುಣಿಪುದು=ದಯೆಯಿಂದ ತಿಳಿಸುವುದು.

185. ಕಾಲಾಂತರಕೆ=ಕೆಲವು ಕಾಲಕ್ಕೆ. ಕಾರೈಸು=ನಿರೀಕ್ಷಿಸು ಅಪೇಕ್ಷಿಸು.

186. ಉರವಣಿಸಿ=ವೇಗವಾಗಿ ಹೆಚ್ಚಿ. ಪರಮತೇಜದ=ಬಳ್ಳಿಯ ಕಾಂತಿಯುಳ್ಳ. ವಿಕೃತರೂಪ=ವಿಕಾರವಾದ ಆಕಾರ.

187. ಗುಜ್ಜು=ತ್ಸ.—ಕುಬ್ಜ, ಗಿಡ್ಡಾದ.

188. ಮಾರ=ಮನ್ಮಥ, ತೋರಮಾಣಿಕ ಎಂದರೇನು? ಸಖತನ=ಸ್ನೇಹ.

189. ಪನ್ನಗಾರಿಧ್ವಜ=ವಿಷ್ಣು; ಹೇಗೆ? ಕೃಪೆ=ದಯೆ.

190. ಕಾಕ=ಕೆಟ್ಟುದನ್ನು. ಗರಳ=ವಿಷ, ನಂಜು. ಅಹವು=ಆಗುವುವು. ಹಳಗನ್ನಡ-ಅಪ್ಪುವು.

191. ಅಕ್ಷದಹೃದಯ=ಅಕ್ಷಹೃದಯವೆಂಬ ಗಣಿತ ವಿದ್ಯೆ. ಅಶ್ವಹೃದಯ=ಕುದುರೆಗಳ ಮನೋಭಾವಾದಿಗಳನ್ನು ತಿಳಿವ ವಿದ್ಯೆ. ಅನುಗೊಳಿಸು—ಇಲ್ಲಿ--ಹೇಳಿಕೊಡು.

192. ಓಲೈಸು=ಸೇವಿಸು. ಹೀನವೃತ್ತಿ=ಕೀಳು ಜೀವನ.

193. ಸತ್ಯವ್ರತ=ನಿಶ್ಚಯವನ್ನು ಹೇಳುವುದೇ ನಿಯಮವಾಗಿ ಉಳ್ಳವನು. ಪುಷ್ಕರ=ನಳನ ದಾಯಾದಿ; ಇವನು ಕಲಿಯ ಸಹಾಯದಿಂದ ನಳನನ್ನು ಜೂಜಿನಲ್ಲಿ ಸೋಲಿಸಿ, ಅವನ ರಾಜ್ಯವನ್ನು ಆಕ್ರಮಿಸಿಕೊಂಡನು. ಸಾಮ್ರಾಜ್ಯವನ್ನು=ಚಕ್ರಾಧಿಪತ್ಯವನ್ನು.

194. ಪ್ರಾಂತ=ಸಮೀಪ. ಉರುತರದ=ಶ್ರೇಷ್ಠವಾದ.

195. ಮಂದಭಾಗ್ಯ=ಭಾಗ್ಯಹೀನ, ಅದೃಷ್ಟಗೇಡಿ. ಮನನೊಂದು=ಮನಸ್ಸಿನಲ್ಲಿ ಕೊರಗಿ.

## 2. ದ್ರೌಪದೀ ಸ್ವಯಂವರ.

(ಈ ಕಥೆಯು ಕಥಾಸಂಗ್ರಹವಲ್ಲಿ ವಿಸ್ತಾರವಾಗಿದೆ.)

ಸೂಚನೆ: ಯಂತ್ರದ ದಾಯ=ಮತ್ಸ್ಯಯಂತ್ರದ ಪಣ. ನಿರ್ಜರರಾಯನಂದನ=ಅರ್ಜುನ; ಹೇಗೆ? ನಿರ್ಜರ=ಮುಪ್ಪಿಲ್ಲದವರು, ದೇವತೆಗಳು.

196. ಪಾಂಚಾಲಿಯು=ಪಾಂಚಾಲದೇಶದ ರಾಜನ ಮಗಳಾದ ದ್ರೌಪದಿಯು. ಮನೋರಥ ಶಾಲೆಯಲ್ಲಿ=ಮನೋರಥ-ಆಶೆಯೆಂಬ ಗೃಹದಲ್ಲಿ ಸಾರಿದರು. ಬ್ರಾಹ್ಮಣರ ಗುಂಪಿನಲ್ಲಿ ದ್ರೌಪದಿ

ಯನ್ನು ವರಿಸಬೇಕೆಂದು ಸಂಕಲ್ಪಮಾಡಿರುವ ಬಲಿಷ್ಠರಿರಾ, ನೀವುಗಳು ಎದ್ದು, ಕೋಲುಗಳ = ಬಾಣಗಳನ್ನು. ಕೇವಣಿ ಪುದು—ಇಲ್ಲಿ ಮತ್ಸ್ಯಯಂತ್ರದಲ್ಲಿ ಬಾಣವನ್ನು ಹೊಡೆದು ಸಿಕ್ಕಿಸಿ ಭೇದಿಸುವುದು ಎಂದರ್ಥ.

197. ದ್ವಿಜ = ದ್ವಿ+ಜ = ಎರಡು ಸಾರಿ ಹುಟ್ಟಿದವರು, ಬ್ರಾಹ್ಮಣರು; ಹೇಗೆ? ಅರ್ಥಾಂತರ–ಹಲ್ಲು, ಹಕ್ಕಿ. ಅರವಿಂದ = ಕಮಲ. ಸ್ಪೃಷ್ಟಭೋಜನ = ಶುದ್ಧವಾದ ಊಟ, ಸವಿಯಾದ ಊಟ. ತುಷ್ಟರು = ತೃಪ್ತರಾದವರು. ವ್ರಾತ = ಗುಂಪು.

198. ವಚನಶೂರರು—ಇಲ್ಲಿ–ವಿದ್ಯೆಯಲ್ಲಿ ಸಮರ್ಥರು. ಪಾರ್ಥಿವ ನಿಚಯ = ರಾಜರ ಸಮೂಹ. ಅನಿಬರನು = ಎಲ್ಲರನ್ನೂ. ಅಚಲಧನು = ಪರ್ವತದಂತೆ ಅಲುಗಾಡಿಸಲಾಗದ ಧನಸ್ಸು. ವಿಸ್ಮಯ = ಆಶ್ಚರ್ಯ.

199. ಭರತದಲ್ಲಿ = ಅಭಿನಯ ಶಾಸ್ತ್ರದಲ್ಲಿ; ಈ ಶಾಸ್ತ್ರಕ್ಕೆ ಭರತ ಮುನಿಯು ಪ್ರವರ್ತಕನಾದುದರಿಂದ ಇದಕ್ಕೆ ಭರತವೆಂದು ಹೆಸರಾಯಿತು.

200. ತನಿಬೆಲ್ಲ = ಸಿಹಿಯಾದ ಬೆಲ್ಲ. ಮೆದೆ = ರಾಶಿ. ಸೂಪ = ತೊವ್ವೆ. ದಂಶಕ = ಉಪ್ಪಿನಕಾಯೀ ಮೊದಲಾದ ವ್ಯಂಜನ ಪದಾರ್ಥಗಳು. ಧೂರ್ತ ವಟುನಿಕರ = ಧೂರ್ತರಾದ ಬ್ರಹ್ಮಚಾರಿಗಳ ಸಮೂಹ.

201. ರಸ = ಪಾದರಸ. ಪುದುಗಿದ = ಒಳಗೆ ಅಡಕವಾದ, ಮಿಸುನಿಯಂತಿರೆ = ಚಿನ್ನದಹಾಗೆ, ಜೀವಭಾವಪ್ರಸರದೊಳಗೆ.... = ಸಕಲಪ್ರಾಣಿಗಳ ಅಂತರಂಗದಲ್ಲಿ ನೆಲಸಿರುವ ಪರಮಾತ್ಮನಂತೆ. ವಿಪ್ರಾಕಾರ = ಬ್ರಾಹ್ಮಣವೇಷ. ಭೂಪತಿ = ಇಲ್ಲಿ–ಧರ್ಮರಾಜ. ತತ್ಸಭಾ....ಳು = ಆ ಸಭೆಯಲ್ಲಿದ್ದ ಜನಗಳ ನಡುವೆ.

202. ಸಂವರಿಸುತ್ತ = ಅಣಿಮಾಡಿಕೊಳ್ಳುತ್ತ.

203. ಅಂಘವಣೆ = ಆಶೆ. ನಿತಂಬಿನಿ = ಹೆಂಗಸು ; ಇಲ್ಲಿ—ದ್ರೌಪದಿ. ವೈನತೇಯನ = ವಿನತಾದೇವಿಯ ಮಗನಾದ ಗರುಡನ ; ಈ ಕಥೆಯನ್ನು ಕಥಾಸಂಗ್ರಹದಲ್ಲಿ ನೋಡಿ. ವಿಗಡಿಸಿದ = ವಿಕಟವಾಗಿ ಮಾಡಿದ, ವಶವಾಗದೆ ಕಷ್ಟಪಡಿಸಿದ. ಸದರ = ಸುಲಭ, ಸಲಿಗೆ. ಹಾವಡಿಗ = ಹಾವನ್ನು ಆಡಿಸುವವನು.

204. ಬೇಕೇ = ಬೇಕಾದರೆ. ಶ್ರೋತ್ರಿಯ = ಸಾಂಗವಾಗಿ ವೇದವನ್ನು ಕಲಿತ ಬ್ರಾಹ್ಮಣ. ಸ್ತೋಮ = ಗುಂಪು. ಅನ್ವಯ = ಕುಲ. ಭೂದೇವ = ಬ್ರಾಹ್ಮಣ. ಭಗೀರಥಯತ್ನ = ಬಹು ಶ್ರಮದಿಂದ ಸಾಧಿಸತಕ್ಕ ಕಾರ್ಯ. ಹಿಂದೆ ಭಗೀರಥನೆಂಬ ರಾಜನು ಪಾತಾಳಲೋಕದಲ್ಲಿ ಕಪಿಲಮುಷಿಯ ನೇತ್ರಾಗ್ನಿಯಿಂದ ಸುಟ್ಟು ಬೂದಿಯಾದ ಸಗರಪುತ್ರರ ಸದ್ಗತಿಗಾಗಿ ಚಿರಕಾಲ ಶ್ರಮಪಟ್ಟು ತಪಸ್ಸುಮಾಡಿ ಗಂಗೆಯನ್ನು ಸ್ವರ್ಗದಿಂದ ಬರಮಾಡಿಸಿಕೊಂಡು ಪಾತಾಳಕ್ಕೆ ಕರೆದುಕೊಂಡು ಹೋದನು ಎಂದು ರಾಮಾಯಣ ಕಥೆ.

205. ಕಾರುಣ್ಯಾವಲೋಕನ = ದಯೆಯೊಡನೆ ಕೂಡಿದ ದೃಷ್ಟಿ. ಸದ್ಭಾವ = ಒಳ್ಳೆಯ ಮನಸ್ಸು. ನಾವು ವಿಜಯರು = ಜಯಶಾಲಿಗಳು. ಇದರಲ್ಲಿ—ವಿಜಯನೆಂದು ಬೇರೆ ಹೆಸರುಳ್ಳ ಅರ್ಜುನನೇ ಮೊದಲಾದವರು ಎಂಬ ಅಭಿಪ್ರಾಯವೂ ತೋರುತ್ತದೆ. ಸಂಭಾವನೋಕ್ತಿ = ಉಪಚಾರದ ಮಾತು. ಬದರಿದರು = ಹೇಳಿಕೊಂಡರು.

206. ಭದ್ರಾಕಾರ = ಮಂಗಳಾಕಾರ, ಲಕ್ಷಣವಾಗಿರುವವನು. ಅಳುಕುವುದು = ಅಂಜಿಕೊಳ್ಳುವುದು.

207. ಮಟ್ಟಿ = ಮಣ್ಣು ; ಇಲ್ಲಿ—ನಾಮ. ಕುಶ = ದರ್ಭೆ. ಕರಡಿಗೆ = ತ್ಸ—ಕರಂಡಕ, ಭರಣಿ. ಕಕ್ಷೆ = ಕೃಷ್ಣಾಜಿನದ ಚೀಲ. ಭಾಸರ = ನಡೆಯುವಾಗ ಸದ್ದಾಗುವ. ನಟ್ಟುವಿಗ = ಹೊಸಗನ್ನಡ—ನಟ್ಟುವ. ಓಸರಿಸಿ = ಒಂದು ಕಡೆಗೆ ಸರಿದು.

208. ನೆಗಹಲ್ಕೆ = ಮೇಲಕ್ಕೆ ಎತ್ತುವುದಕ್ಕೆ. ಸಮಿಧೆ = ಸಮಿತ್ತು, ತಿಲ = ಎಳ್ಳು. ಬಣಗು = ಧೂರ್ತ

209. ಇಸುವರು = ಹೊಡೆವರು. ತಲೆಗುತ್ತಿ = ತಲೆಯನ್ನು ಬಾಗಿಸಿಕೊಂಡು. ಉಂಗುಟ = ಕಾಲ ಹೆಬ್ಬೆರಳು ; ತ್ಸ.—ಅಂಗುಷ್ಠ

210. ನಿಬ್ಬರ = ತ್ಸ.—ನಿರ್ಭರ. ಯಥೇಚ್ಛವಾದ ಕಟುಮಧುರೋಕ್ತಿ = ಕಹಿಯಾಗಿಯೂ ಸಿಹಿಯಾಗಿಯೂ ಇರುವ ಎಂದರೆ ಅಹಿತವಾಗಿಯೂ ಹಿತವಾಗಿಯೂ ಇರುವ ಮಾತು. ಗರುವಾಯಿ = ಬೆಡಗು, ಗಾಂಭೀರ್ಯ.

211. ತಿರುವು = ನಾರಿ, ಧನುಸ್ಸಿನ ಹಗ್ಗ. ಕಿವಿವರೆಗೆ = ಕಿವಿಯತನಕ ಉಯ್ದು—ಇಲ್ಲಿ—ಎಳೆದು. ಹದವಿಲ್ಲು = ಪ್ರಮಾಣಕ್ಕೆ ಸರಿಯಾದ ಧನುಸ್ಸು, ಹವಣಾದ ಬಿಲ್ಲು. ಮಾಗಧಾದಿಗಳು—ಮಗಧ ದೇಶಾಧಿಪನಾದ ಶಿಶುಪಾಲನೇ ಮೊದಲಾದವರು. ಕೈತೆಗೆವರು = ಕೈಯನು ತೆಗೆದರು, ಹಿಂದಾದರು. ಹೆಸರು + ಎನಗೆ + ಎಯ್ದಬೇಕು = ಹೆಸರು ಬರಬೇಕು. ಹೊಳಹು = ಛಾಯೆ.

212. ಲಾಗುವೇಗ = ಬಾಣಪ್ರಯೋಗದ ವೇಗ, ಕೈಚಳಕ. ಜಾಗು! ಧಣು! ಪೂತು! = ಶಹಬಾಸು. ಕಾರ್ಮುಕ........ಸಿದ್ಧ = ಧನುರ್ವಿದ್ಯೆಯಲ್ಲಿ ಪಂಡಿತನಾದವನು. ಕೋ........ರಿ = ಧನುರ್ವಿದ್ಯೆಯಲ್ಲಿ ತ್ರಿಪುರವೈರಿಯಾದ ಮಹೇಶ್ವರನಿಗೆ ಸದೃಶನಾದವನು. ವಂದಿಸಂದೋಹ = ಹೊಗಳುಭಟ್ಟುಗಳ ಗುಂಪು.

213. ಬೊಬ್ಬಿರಿದು = ಕೂಗಿ. ನಿರ್ದಾಯದಲಿ = ದಾಯತಪ್ಪಿ. ಯುವತಿಜನ = ಪ್ರಾಯದ ಹೆಂಗಸರು. ಬಾಯಮೌನದ = ಮೌನವಾದ ಬಾಯುಳ್ಳ ಎಂದರೆ ಮಾತಾಡದ ಹೀಗೆಯೇ ಬೆರಳ ಮೂಗಿನ, 'ಬಿಗಿದ ಬೆರಗಿನ,' ಇತ್ಯಾದಿಗಳನ್ನೂ ಅರ್ಥಮಾಡಿಕೊಳ್ಳಬೇಕು.

213½. ಮೊಳಗಿದುವು = ಧ್ವನಿಮಾಡಿದುವು. ನಿಸ್ಸಾಳ = ಭೇರಿ. ಹೆಕ್ಕಳ—ಹಳಗನ್ನಡ—ಪೆರ್ಕಳ = ಅತಿಶಯ. ಸಾಧುವಾದ = ಸಾಧು ಸಾಧು ಎಂಬ ಮಾತು,

214. ಹೊರೆ=ಸಮೀಪ ; ಪ್ರ-'ನೆರೆಹೊರೆ.' ಬಳತೋಟಿ=ಅಂ ತಃಕಲಹ ; ಸಂತೋಷವೂ ನಾಚಿಕೆಯೂ ಬಂದರೊಡನೆ ಬಂದು ಹೋರಾಡ ತೊಡಗಿದುವು ಎಂದರೆ ಸಂತೋಷವೂ ನಾಚಿಕೆಯೂ ಏಕಕಾಲದಲ್ಲಿ ಕಾಣಿಸಿಕೊಂಡುವು. ಅಪಾಂಗ=ಕಡೆಗಣ್ಣ ನೋಟ. ಮುಕ್ಕುಳಿಸು=ಬಾಯಲ್ಲಿ ನೀರು ತುಂಬಿಕೊಂಡು ಉಗುಳುವುದು ; ಇಲ್ಲಿ ಕುಡಿವುದು.

214½ ಹೊರೆದ=ವ್ಯಾಪಿಸಿದ. ದಂಡೆಯನು=ದಂಡೆಯ ಸರವನ್ನು. ನಿಜವರನ=ತನಗೆ ವರನಾದ ಅರ್ಜುನನ.

22. ಶ್ರೀರಾಮನು ಅಯೋಧ್ಯೆಯನ್ನು ಬಿಟ್ಟದು.

215 ವಸತಿ=ಸ್ಥಲ, ಮಂಟಪ. ಲಾಂಛನ=ಗುರುತು, ಎಂದರೆ ಛತ್ರ, ಚಾಮರ ಮುಂತಾದುವು. ಬಸಗೆ=ಮಂಗಳ. ಅವಲಂಬಿಸು= ಆಶ್ರಯಿಸು. ಸುಮಂತ್ರನ=ಸುಮಂತ್ರನೆಂಬ ಮಂತ್ರಿಯನ್ನು ಮುನಿ=ವಸಿಷ್ಠ ಮಹರ್ಷಿ.

216. ಭಕ್ತಿಪೂರ್ವಕದಿಂದ=ಭಕ್ತಿಯನ್ನು ಮುಂದಿಟ್ಟುಕೊಂಡು. ಸತ್ಕರಿಸು=ಆದರಿಸು, ಉಪಚರಿಸು. ವಿಧಾನ=ಕ್ರಮ. ಕಾನನ=ಕಾಡು. ಅರವಿಂದಮುಖಿ=ಇಲ್ಲಿ-ಸೀತೆ. ಸಂಭವಿಸಿತು= ಉಂಟಾಯಿತು. ಪರಿಭ್ರಮಣ=ಸುತ್ತುವಿಕೆ.

217. ಅಸಿತರಲ್ಲಿ=ಅಪ್ಸರೆರೊಳಗೆ. ಆಗಮುಸ್ಥಿತಿಗೆ=ಕೈಗೂಡುವ ಸಂದರ್ಭಕ್ಕೆ, ಆಯಸ=ಶ್ರಮ ; ತ್ಸ.-ಆಯಾಸ. ಪುರಂದರ= ಇಂದ್ರ.

218. ದುರ್ಘಟ=ಇಲ್ಲಿ-ಕೆಡುಕು. ನಿರ್ದೈವರು=ದೈವಸಹಾಯವಿಲ್ಲದವರು. ಬೊಮ್ಮ=ಬ್ರಹ್ಮ, ಕೋಟಿ ಬ್ರಹ್ಮರ ಕಿರೀಟಗಳಿಂದ, ಮಂಡಿತ=ಅಲಂಕೃತವಾದ, ನಿರ್ಮಲವಾದ. ಅಂಘ್ರಿ= ಚರಣಗಳು. ನಖ=ಉಗುರುಗಳೆಂಬ ಸೂರ್ಯನುಳ್ಳವನು ; ಎಂದರೆ, ಅನೇಕ ಬ್ರಹ್ಮರಿಂದ ನಮಸ್ಕರಿಸಲ್ಪಟ್ಟ ವಿಷ್ಣುವಿನ ಅವತಾರವಾದ ರಾಮನು.

219. ಅಧಿರಾಜ=ರಾಜರಿಗೆ ರಾಜ. ಸೂನೃತಚರಿತ=ಸತ್ಯಚರಿತ್ರ. ಸುರಮಹೀರುಹ=ಕಲ್ಪವೃಕ್ಷ ; ಇದರ ಅವಯವಾರ್ಥವೇನು ?

ಸಾದ್ಗುಣ್ಯಸಕಲೈಶ್ವರ್ಯ=ಸಫಲವಾದ ಸಕಲ ಸಂಪತ್ತುಳ್ಳವನು; ಪರೋಪಕಾರದಿಂದ ತನ್ನ ಎಲ್ಲಾ ಭಾಗ್ಯವನ್ನೂ ಸಫಲವಾಗಿ ಮಾಡಿದವನು.

220. ಬಿಸರುಹಪ್ರಿಯ=ಸೂರ್ಯ; ಹೇಗೆ? ಮುನಿ....ಹಂಸನ—ಋಷಿಗಳ ಮನಸ್ಸೆಂಬ ಸರೋವರಕ್ಕೆ ರಾಜಹಂಸದಂತಿರುವ, ಎಂದರೆ ಮುನಿಗಳ ಧ್ಯಾನಕ್ಕೆ ಪಾತ್ರನಾದ ರಾಮನನ್ನು. ಬಸಗೆವರೆ=ಬಸಗೆ+ಪರೆ=ಮಂಗಳವಾದ್ಯ. ಭುಲ್ಲೈಸೆ=ಹೆಚ್ಚಲು; ಇಲ್ಲಿ—ಶಬ್ದಮಾಡಲು. ಮೂರ್ಧಾಭಿಷೇಕ=ರಾಜ್ಯಾಭಿಷೇಕ. ಪಟ್ಟಾಭಿಷೇಕಕಾಲದಲ್ಲಿ ರಾಜರಿಗೆ ಗಂಗಾದಿಪುಣ್ಯನದಿಗಳ ತೀರ್ಥದಿಂದ ಅಭಿಷೇಕಮಾಡುವುದು ಪದ್ಧತಿ.

221. ಧೇನು=ಹಸು. ಝಾಡಿವೆಳಗು=ಒತ್ತೊತ್ತಾಗಿ ಉರಿಯುತ್ತಿರುವ ದೀಪಗಳ ಬೆಳಕು. ಆರತಿ—ತ್ರ. ಆರಾತ್ರಿಕ. ಮುಂಡಾಡು=ಮುದ್ದಾಡು. ಕಂಬಿ=ಕೋಲು, ಲಟ್ಟಿ. ಕಂಚುಕಿಜನ=ಕಂಚುಕವನ್ನು (=ಅಂಗಿಯನ್ನು) ಧರಿಸಿರುವವರು, ಆಳುಗಳು.

222. ಅಡರಿದನು=ಹತ್ತಿದನು. ಹೊಂಬೆಸ=ಹೊನ್+ಬೆಸ=ಚಿನ್ನದ ಕೆಲಸ, ರೆಂಚೆಯ=ಆನೆಯಮೇಲೆ ಹೊದೆಯಿಸುವ ಜೂಲು. ಲಳಿಯ=ಸೌಂದರ್ಯದ ಸೊಗಸಿನ. ಭದ್ರಾ=........ಕಂಧರದಿ=ಮಂಗಳಕರವಾಗಿಯೂ ವಿಸ್ತಾರವಾಗಿಯೂ ಇರುವ ಆನೆಯ ಕೊರಳಿನಲ್ಲಿ. ತೂರ್ಯತ್ರಯ=ನೃತ್ತಗೀತವಾದ್ಯ ಎಂಬ ಇವು ಮೂರು ಸೇರಿ ಈ ಹೆಸರಿನಿಂದ ವ್ಯವಹರಿಸಲ್ಪಡುತ್ತವೆ.

223. ಹೆಕ್ಕಳಿಸು=ಹೆಚ್ಚು. ಉಗ್ಗಡಿಸು=ಗಟ್ಟಿಯಾಗಿ ಕೂಗಿಹೇಳು. ನಿಳಯ=ಮನೆ.

224. ತಳಿತ=ಹಳಗನ್ನಡ—ತಳ್ತ, ಎಂದರೆ ಗುಂಪಾಗಿರುವ. ಪಲ್ಲವ=ತೋರಣಗಳಿಗೆ ಕಟ್ಟಿದ ಚಿಗುರುಗಳು. ಪಲ್ಲವವನ=ಕಾಡುಮರಗಳ ಚಿಗುರುಗಳನ್ನು. ಉಜ್ಜ್ವಳಿಪ ಹರ್ಮ್ಯಾಳಿಗಳು=ಪ್ರಕಾಶಮಾನವಾದ ಉಪ್ಪರಿಗೆ ಸಾಲುಗಳು. ಚಿತ್ರಾ

ಚಲವನು—ವಿಚಿತ್ರಗಳಾದ ಪರ್ವತಗಳನ್ನು. ಆರಾಮೋವಳಿಯು—ಶೃಂಗಾರವನಗಳಲ್ಲಿರುವ, ಶಿಖಿ.....ವ್ರಜದ—ನವಿಲು, ಗಿಳಿ, ಕೋಗಿಲೆಗಳ ಸಮೂಹಗಳ. ಉಲುಹು—ಶಬ್ದವು. ವಿಪಿನವಿಹಂಗಮದ—ಕಾಡು ಪಕ್ಷಿಗಳ. ಕಟ್ಟುಲುಹ—ಹೆಚ್ಚಾದ ಶಬ್ದವನ್ನೂ; ಸೂಚಿಸುತ್ತ, ಅವನಿಜಾಪತಿಗೆ—ರಾಮನಿಗೆ ವನ..........ಪದವಿಯನು—ವನವೆಂಬ ರಾಜ್ಯದಲ್ಲಿ ಉಂಟಾಗುವ ಪ್ರಕಾಶಮಾನವಾದ ಹೊಸತಾದ ರಾಜಪದವಿಯನ್ನು ಸೂಚಿಸುತ್ತಿದ್ದುವು; ಮುಂದೆ ರಾಮನಿಗೆ ಉಂಟಾಗುವ ವನವಾಸವನ್ನು ಸೂಚಿಸುವಹಾಗೆ ಇದ್ದುವು ಎಂದು ತಾತ್ಪರ್ಯಾರ್ಥ.

225. ಕವಿದಿದ—ಕಲಕಿದ. ಅಂತಃಕರಣಗಳ=ಹೃದಯವುಳ್ಳ. ಗದಗದಿತಕಂಠ—ಗದ್ಗದಧ್ವನಿ. ಚಮೂಪ—(ಚಮೂ+ಪ,) ಸೇನಾಪತಿ. ನಿಯೋಗಿ ಅಧಿಕಾರಿ. ಮುರಿವಿನ ಮುದದ=ಮುರಿದುಹೋದ ಸಂತೋಷದ.

226. ದೊದ್ದೆಯ—ಗುಂಪನ್ನು. ತೆವರಿ—ಚೆದರಿಸಿ. ಅವನಿತನುಜಾಪತಿಗೆ—ರಾಮನಿಗೆ; ಹೇಗೆ? ಭವನ=ಮನೆ.

227. ಗುಜುಗುಜು—ಗುಸುಗುಂಪಲು ಮಾತು. ಶೂನ್ಯೋತ್ಸವ—ಯಾವ ಸಂಭ್ರಮವೂ ಇಲ್ಲದ. ಜಾಡ್ಯ—ಇಲ್ಲಿ—ಉತ್ಸಾಹವಿಲ್ಲದಿರುವಿಕೆ; ಜಾಡ್ಯವೆಂಬುದೆ ಬಂದು. ಜವನಿಕೆ=ತೆರೆ. ಇದರಿಂದ ಉಂಟಾದ ಜಂಜಡ=ಹಿಂಸೆ, ತೊಂದರೆ. ಉತ್ತರವು ಸಂಭವಿಸಲು, ಅವನಿಗೆ, ನಮಗೆ ಅಸಾಧ್ಯವೆಂಬೀ ವ್ಯವಹರಣೆ ಗೋಚರಿಸುತಿದೆ ಎಂದನ್ವಯ.

228. ಮರುಮಾತು. ಉದಿಸದೆ—ಹೊರಡದೆ. ಇದನು—ಸ್ಥಿತಿ, ವಿದ್ಯಮಾನ.

229. ವಿತತ—ಹೆಚ್ಚಾಗಿ. ಗಳಿತ—ಜಾರುತ್ತಿರುವ. ಅಶ್ರುಪ್ರಕರ=ಕಣ್ಣೀರಿನ ಸಮೂಹದಿಂದ. ಪೂರಿತ—ತುಂಬಿದ. ನಿಮೀಲಿತ—ಮುಚ್ಚಿರುವ. ನೇತ್ರ—ಕಣ್ಣುಗಳುಳ್ಳವನಾಗಿಯೂ ನಿರ್ಗತ—ಸ್ತಬ್ಧನಾಗಿಯೂ. ಗತವಚೋವಿಪ್ಲವನ—ಮಾತುಹೋಗಿ ಚಿಂತಾಕ್ರಾಂತನಾಗಿಯೂ, ಶೋಕೋದ್ರೇಕದಿಂದ ಪರವಶ

ನಾಗಿಯೂ. ಸತಿಯು=ಕೈಕೆಯು. ಕರ್ಕಶ=ಕಠಿನವಾದ. ಕಲುಷ=ಪಾಪಕರವಾದ. ವಾಗಸಿ=ಮಾತೆಂಬ ಕತ್ತಿಯ. ಹತಿ=ಪೆಟ್ಟಿನಿಂದ. ನಿರೋಧಿತ=ತಡೆಯಲ್ಪಟ್ಟ. ಹೃದಯ=ಹೃದಯದ. ಬಾಧಾನ್ವಿತನ=ನೋವಿನಿಂದಕೂಡಿದವನಾಗಿಯೂ (ಇದ್ದ ದಶರಥನನ್ನು) ಕಾಣುತ; ರಾಮನು, ಕೈಯಕದಪಿನಲಿ=ಚಿಂತೆಯಿಂದ ಕೆನ್ನೆಯನ್ನು ಕೈಯಮೇಲೆ ಇಟ್ಟುಕೊಂಡು (ಕುಳಿತಿದ್ದನು).

230. ಬಯ್ಯನೆ=ಮೆಲ್ಲಗೆ. ರಾಜರಾಜಾಧೀಶನನು=ದಶರಥ ಚಕ್ರವರ್ತಿಯನ್ನು. ಈಸು=ಇಷ್ಟು. ನಿರೋಧ=ತಡೆ. ಕ್ಲೇಶ=ದುಃಖವಾಸವಾದುದು=ನೆಲೆಗೊಂಡಿತು. ದೇವರ=ತಮ್ಮ. ಅಂಗದಲ್ಲಿ=ದೇಹದಲ್ಲಿ.

231. ಸಾರ್ವಭೌಮ=ಚಕ್ರವರ್ತಿ. ಎರವು=ಎಂದರೆ ಸಹಜವಾಗಿ ಇಲ್ಲದಿರತಕ್ಕ ವಸ್ತು. ದುಃಶ್ಚಿತ್ತ=ಕೆಟ್ಟಮನಸ್ಸು. ವಿಷಾದ=ದುಃಖ. ಚಿಂತಾಸ್ಪರ್ಶ=ದುಃಖದ ಸೋಂಕು. ಯೋಗೋತ್ಕರ್ಷದೇಹ=ರಾಜಯೋಗದಿಂದ ಉತ್ಕೃಷ್ಟವಾದ ದೇಹವುಳ್ಳವನೇ.

232. ಆಮಧುರ........ಗಾರುಡಮಂತ್ರ=ಆ ಸವಿಮಾತೆಂಬ ಸೊಗಸಾದ ವಿಷಾಪಹಾರಕವಾದ ಗರುಡಮಂತ್ರವು. ಆ ಮಹಾ........ದಷ್ಟನನು=ಆ ಮಹತ್ತಾದ ದುಷ್ಟಸ್ತ್ರೀಯ ನಾಲಗೆಯೆಂಬ ಸರ್ಪದಿಂದ ಕಚ್ಚಲ್ಪಟ್ಟ ದಶರಥನನ್ನು.

233. ಅಭಿಷೇಚನದ=ಪಟ್ಟಾಭಿಷೇಕದ. ರಾಜ್ಯಶ್ರೀಯ ಪರಿಣಯಕೆ=ರಾಜ್ಯ ಲಕ್ಷ್ಮಿಯ ವಿವಾಹಕ್ಕೆ. ಅಭಿಮತ=ಇಷ್ಟ. ರಾಯತನದ ಅಭಿಮುಖದ ಕಮಲದಳಾಯತಾಂಬಕ=ರಾಜತ್ವವನ್ನು ಇದಿರುನೋಡುತ್ತಿರುವ, ಎಂದರೆ ಪಟ್ಟಾಭಿಷೇಕಕ್ಕೆ ಸಿದ್ಧನಾಗಿರುವ ರಾಮಚಂದ್ರನು. ಮುನಿರಾಯ=ವಸಿಷ್ಠ.

234. ಮನುಕುಲಾಂಬರ ಗಗನಮಣಿ=ಮನುಕುಲವೆಂಬ ಆಕಾಶಕ್ಕೆ ಸೂರ್ಯನಂತಿರುವವನೆ, ಎಂದರೆ ಮನುವಂಶಶ್ರೇಷ್ಠನೇ. ಸೂನೃತವ್ರತ=ಸತ್ಯವನ್ನು ಆಡುವುದೆ ವ್ರತವಾಗಿ ಉಳ್ಳವನು.

ಒಗುವ=ಸುರಿವ. ನಯನೋದಕ=ಕಣ್ಣೀರು. ಅರೆದಿಟ್ಟಿ=ಅರ್ಧದೃಷ್ಟಿ. ಸತ್ಯದ ತಗಹಿನ=ಸತ್ಯವನ್ನು ಬಿಡದ. ತಗಹು=ಸಂಬಂಧ.

235. ಅಣುಗ=ಪ್ರೀತಿಪಾತ್ರ. ವತ್ಸಲ. ಅಣುಗು=ಪ್ರೀತಿ. ಮೇಲುತ್ತರಕೆ=ಮೇಲುಮಾತಿಗೆ. ಬಳಸರಿದು=ಬಳಕ್ಕೆ ಎಳೆದುಕೊಂಡು, ಎಂದರೆ ಮಾತನಾಡಬೇಕೆಂದು ಯತ್ನಿಸಿದರೂ ಆಡಲಾರದೆ.

236. ವಿಭವ=ಸಂಪತ್ತು. ಸೊಬಗು=ಸೌಭಾಗ್ಯ. ಸುಧಾಂಬುಧಿ=ಕ್ಷೀರಸಾಗರ. ನೆಲೆವೀಡು=ಇರುವ ಸ್ಥಳ. ಲೇಸು=ಶ್ರೇಯಸ್ಸು. ಆಗರ=ಮನೆ. ಆಕರ, ಗಣಿ. ಬಹಳಿತ=ಹೆಚ್ಚಾದ. ಕೋಶ=ಬಂಡಾರ. ಸಂತಸ=ಸಂತೋಷ. ಇಕ್ಕೆ=ಸ್ಥಾನ. ಸೊಂಪು=ಆಧಿಕ್ಯ, ಸಮೃದ್ಧಿ. ನಿವಾಸ=ಮನೆ; ಈ ಮನೆಯು ಇದುವರೆಗೂ ಹೀಗೆ ಇದ್ದಿತು ಎಂದನ್ವಯ.

237. ಆಡುಂಬೊಲ=ಕ್ರೀಡಾವನ. ಕುಹಕ=ಕೆಟ್ಟ ಆಲೋಚನೆ. ನಿಸರ=ಸಮೂಹ. ವಸತಿ=ಸ್ಥಾನ. ಮುಗುಡ=ಚಿಂತೆ, ದುಃಖ. ಬೀಡು ಎಂದರೇನು? ಜನಸಾನ=ಮಂಟಪ. ಆರವೆ=ದ್ಭ. —ಆರಾಮ, ತೋಟ, ಪುದಿದ=ತುಂಬಿಗ. ಆಯಸದ=ಆಯಾಸದ, ಶ್ರಮದ. ಜಾಳಿಗೆ=ಬಲೆ, ಚೀಲ.

238. ಬಾಹಿರರು=ಹೊರಗಾದವರು. ಅರೆಗಲಿಸಿಗಳು=ಅರ್ಧಪಾಲು ಮಾತ್ರ ಸೇರಿದವರು. ಜೇರೆಂಗೆ+ಉರಿಯುನು.

239. ಮೇಲನು+ಅಱಿಯದೆ=ಮುಂದೆ ಬರತಕ್ಕದನ್ನು ತಿಳಿಯದೆ. ಘಾತಾಳಿ=ಘಾತಮಾಡುವವಳು, ಕೊಲೆಪಾತಕಳು. ಸಂಗ್ರಾಮ=ಯುದ್ಧ. ಬಾಳು=ಕತ್ತಿ. ಗೋನಾಳಿಗೆ=ಕುತ್ತಿಗೆಗೆ. ನರಸುಕ್ಕು=ನರಗಳು ಸುಕ್ಕಿಕೊಳ್ಳುವ ಮುದ್ದು.

240. ಹೊದಕುಳಿಗುಟ್ಟುತ್ತಿಹರು=ಸಂತಾಪಪಡುತ್ತಿರುವರು.

241. ಬಂದಿಸಿದರು=ಕೊಟ್ಟರು.

242. ಬಳಗು=ಅಂತರಂಗ, ಗುಟ್ಟು. ಸತ್ಯಕ್ಕೆ. ಪರಾಙ್ಮುಖತೆ ಎಂದರೆ ಮೊಗದಿರುಹುವಿಕೆ. ಇನಿತು ದೊಡ್ಡಿತೆ=ನನಗೆ ಈಗ ಆದ ಗೌರವವೆ?

243. ದಧೀಚಿ=ಈತನು ವೃತ್ರಾಸುರನ ಸಂಹಾರದಲ್ಲಿ ಇಂದ್ರನಿಗೆ ಆಯುಧವಾಗುವಂತೆ ತನ್ನ ಮೂಳೆಗಳನ್ನು ಕೊಟ್ಟನು. ಶಿಬಿ –ಈತನು ತನ್ನನ್ನು ಮರೆಹೊಕ್ಕ ಕಪೋತವನ್ನು ರಕ್ಷಿಸುವುದಕ್ಕಾಗಿ ತನ್ನ ಮಾಂಸವನ್ನು ಕೊಯ್ದು ಗಿಡುಗನಿಗೆ ಕೊಟ್ಟನು. ಬಲಿ—ವಾಮನಾಕಾರದಿಂದ ತನ್ನನ್ನು ಬೇಡಿದ ವಿಷ್ಣುವಿಗೆ ಭೂಮಿಯನ್ನು ದಾನಕೊಟ್ಟನು. ಜೀಮೂತವಾಹನ–ಈತನು ಶಂಖಚೂಡನೆಂಬ ನಾಗನನ್ನು ರಕ್ಷಿಸುವುದಕ್ಕಾಗಿ ತನ್ನ ದೇಹವನ್ನು ಗರುಡನಿಗೆ ಆಹಾರವಾಗಿ ಕೊಟ್ಟನು ಕಪೋತ—ಇದು ತನ್ನ ಅತಿಥಿಯಾಗಿ ಬಂದ ಬೇಡನ ಹಸಿವನ್ನು ಇಂಗಿಸುವುದಕ್ಕಾಗಿ ಬೆಂಕಿಯಲ್ಲಿ ಬಿದ್ದು ತನ್ನ ದೇಹವನ್ನು ಆಹಾರವಾಗಿ ಕೊಟ್ಟಿತು.

244. ಖಡ್ಡತನ=ದಾರ್ಢ್ಯ, ಖಂಡಿತತನ. ಕವಡು=ಮೋಸ. ಬೊಡ್ಡಿ=ದಾಸಿ, ತೊತ್ತು. ದೂದು=ದೂತಿ. ಹೆಣ್ಣಾಳು. ಅಡ್ಡು=ತಡೆ.

245. ಅಗ್ಗಳರು=ಶ್ರೇಷ್ಠರು. ನಮ್ಮಗು+ಅಪಕೀರ್ತಿ=ಅಪಕೀರ್ತಿ ಹೊದ್ದುವುದು. ಕೂರಿತು=ತೀಕ್ಷ್ಣವಾದದು. ಕದರ್ಥದಿ=ದುರಭಿಪ್ರಾಯದಿಂದ.

247. ಖೋಡಿ=ಅಪಾಯ.

248. ಪುನರುಕ್ತಿ=ಬೇರೆ ಮಾತು, ಎರಡು ಮಾತು.

249. ಗದಿಸಬೇಡ=ಹೇಳಬೇಡ.

250. ಘಟ.... ....ಭೂಷಣವೆ=ನಮ್ಮ ವಂಶವೆಂಬ ಒಡವೆಯನ್ನು ಕಲ್ಮಷ ಹೋಗುವಹಾಗೆ ಈ ಪರೀಕ್ಷೆಯೆಂಬ ಶರಾವೆಯಲ್ಲಿ ಕಾಸಿದಿರಿ.

## 23. ಸ್ಯಮಂತಕೋಪಾಖ್ಯಾನ.

ಸೂಚನೆ: ನಿತ್ಯಾತ್ಮಕ—ಇಲ್ಲಿ-ಕೃಷ್ಣ.

253. ತರಣಿ—ಸೂರ್ಯ. ಅಂಬುರುಹಮಿತ್ರ ಎಂದರೇನು? ಪುರವಾಸಿಜನ—ಆ ಊರಲ್ಲಿ ವಾಸಮಾಡುವ ಜನರು. ಹರಿತಂದು—ಓಡಿಬಂದು.

255. ಚರಣ ಕಮಲಯುಗ—ಪಾದಪದ್ಮಯುಗ್ಮ. ರಾಜೀವಸಖ—ಸೂರ್ಯ. ಸೀವುತಿಪೆ—ಇದು 'ಸೀಯುತಿಪೆ' ಎಂದಿರಬೇಕು; ಪ್ರಾಸಸ್ಥಾನದಲ್ಲಿರುವುದರಿಂದ 'ಸೀವುತಿಪೆ' ಎಂದು ಕವಿ ಪ್ರಯೋಗಿಸಿದ್ದಾನೆ. ಹೀಗೆಯೇ 'ಈವುತೆ' ಎಂದೂ ಪ್ರಯೋಗಿಸಿದೆ. 161ನೆಯ ಪದ್ಯವನ್ನು ನೋಡು.

256. ಕಂಜಸಖ=(ಕಂ+ಜ=ನೀರಿನಲ್ಲಿ ಹುಟ್ಟಿದ ತಾವರೆ+ಸಖ) ಸೂರ್ಯ. ಗುಂಜೆ...... ಮರುಳುಗಳಂತೆ=ಗುರುಗುಂಜಿಯನ್ನು ಮಾಣಿಕ್ಯವೆಂದು ಭ್ರಮಿಸುವ ಹುಚ್ಚರಂತೆ.

257. ಮಧುವೈರಿ—ಮಧುವೆಂಬ ರಾಕ್ಷಸನಿಗೆ ವೈರಿಯಾದ ವಿಷ್ಣು; ಇಲ್ಲಿ—ಕೃಷ್ಣ. ಆಧಿ—ಮನೋವ್ಯಥೆ. ವ್ಯಾಧಿ—ರೋಗ ದುರ್ಭಿಕ್ಷ—ಕ್ಷಾಮ.

258. ಲೆಕ್ಕಿಸದೆ—ಲಕ್ಷ್ಯಮಾಡದೆ. ಉಬ್ಬು—ಗರ್ವ.

259. ಮೃಗಯಾ ......ವಿನೋದ—ಬೇಟೆಯಾಟದ ವಿನೋದ. ಕೆರಳಿ—ಕೋಪಿಸಿಕೊಂಡು. ಜಾಂಬವನು—ರಾಮದೂತನಾದ ಜಾಂಬವಂತನೆಂಬ ಕರಡಿ.

260. ತೆತ್ತಿಗ—ನೆಂಟ. ಶಂಕಿಸಲು—(ರತ್ನದಾಸೆಗಾಗಿ ಕೃಷ್ಣನೇ ಕೊಂದನೆಂದು) ಸಂದೇಹಪಡಲು. ನಿರ್ಮಳಮೂರ್ತಿ—ಕೃಷ್ಣ. ವಿಲಗ—ಅಪಖ್ಯಾತಿ. ಅಸುರಾಂತಕ—ರಾಕ್ಷಸರಿಗೆ ಯಮನೆನಿಸಿರುವ ಕೃಷ್ಣ.

261. ಸಿಂಹದಲಿ—ಸಿಂಹದಿಂದ. ವಿಪಿನಾಂತದಲಿ—ಕಾಡಿನ ನಡುವೆ. ಅಡಗೆಡೆದಿರಲು—ಸತ್ತು ಬಿದ್ದಿರಲು.

262. ನರಸಿಂಹ=ಪುರುಷಶ್ರೇಷ್ಠನಾದ ಕೃಷ್ಣ. ಗಹ್ವರ=ಗವಿ. ಅಪವಾದ......ತರ=ಅಪವಾದವೆಂಬ ಶಿಖಿ=ಬೆಂಕಿಯಿಂದ. ದಂದಹ್ಯಮಾನ=ಅನವರತವೂ ಸುಡಲ್ಪಡುತ್ತಿರುವ. ಅಂತರನು=ಹೃದಯವುಳ್ಳವನು, ಕೃಷ್ಣನು. ಅಸಹ್ಯ....ವಿದೂರನು-ಅಸಹ್ಯ=ಸಹಿಸಕೂಡದ; ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂಬ ತಾಪತ್ರಯದಿಂದ; ವಿದೂರನನು=ದೂರವಾದವನನ್ನು. ಋಕ್ಷಪ=ಕರಡಿಗಳಿಗೆ ರಾಜನಾದ ಜಾಂಬವಂತ.

263. ಧಾತ್ರಿ=ದಾದಿ. ಹರಿತಂದನು—ಎಂದರೇನು?

264. ತರುಬಿ=ತಳ್ಳಿ. ಮೂದಲಿಸು=ಬಬ್ಬರ ದೋಷವನ್ನು ಎತ್ತಿ ಹಾಕಿ ಆಡು.

265 ಅಷ್ಟವಿಂಶತಿ=೨೮. ಇದು—'ಅಷ್ಟಾವಿಂಶತಿ' ಎಂದಿರಬೇಕು. ಸತ್ವ=ಬಲ. ಅರಿಷ್ಟವೈರಿಯ=ಕೃಷ್ಣನ. ಕರಹತಿ=ಕೈಯಪೆಟ್ಟು, ನಿಷ್ಪಿಷ್ಟಗಾತ್ರ=ಕಿವಿಚಿಹೋದ ಮೈಯುಳ್ಳವನಾಗಿ.

266. ಕೌಸ್ತುಭಧಾರಿ=ವಿಷ್ಣು. ಶಂಕರ=ಈಶ್ವರ. ಸರಸೀರುಹೋದ್ಭವ=ಬ್ರಹ್ಮ; ಹೇಗೆ? ಈ ಯುಗದೊಳಗೆ—ಜಾಂಬವಂತನು ರಾಮಾವತಾರಕಾಲದಲ್ಲಿದ್ದವನಾದುದರಿಂದ ಹೀಗೆ ಹೇಳುತ್ತಾನೆ.

267. ವಿಜ್ಞಯಿಸು=ನಮಸ್ಕರಿಸು. ಮರವೆ=ಅಜ್ಞಾನ; ಧಾ—ಮರೆ. ಅತ್ತನು=ಕಣ್ಣೀರು ಸುರಿಸಿದನು.

268. ನೆಗಹಿದನು=ಎತ್ತಿದನು. ತಕ್ಕೈಸಿದನು=ಅಪ್ಪಿಕೊಂಡನು. ಬಕುತ=ಭಕ್ತ. ಮಣಿಕೃತದೋಷ=ರತ್ನದಿಂದ ಉಂಟಾದ ಅಪವಾದ. ಜನಜಾಲದಿ+ಆವಿರ್ಭವಿಸಿದುದನು.

269. ಪರಾಪರವಸ್ತು=ವಿಷ್ಣು; ಇಲ್ಲಿ—ಶ್ರೀಕೃಷ್ಣ. ವೇದಾಂತ=ಉಪನಿಷತ್ತುಗಳಲ್ಲಿ. ವಿಶ್ರುತ=ಪ್ರಖ್ಯಾತನಾದವನು.

270. ಗುಣರತ್ನ ಮೂರುತಿ=ಸದ್ಗುಣವೆಂಬ ರತ್ನಗಳಿಗೆ ಶರೀರಪ್ರಾಯನಾದವನು. ನೂತ್ನ=ಹೊಸಬ.

272. ಕೊರತೆ=ಕುಂದು, ಅಪವಾದ. ಎರಗಿ=ನಮಸ್ಕರಿಸಿ. ಲಜ್ಜಾಭಾರದಲ್ಲಿ=ನಾಚಿಕೆಯಹೊರೆಯಿಂದ. ಕೈಮರೆಯುವೊಗದಲಿ=ಮುಖವನ್ನು ಕೈಯಲ್ಲಿ ಮುಸಸಿಕೊಂಡು. ತೇಜ=ತೇಜಸ್ಸು, ಐಶ್ವರ್ಯ.

## 24. ರಾತ್ರಿಯ ವರ್ಣನೆ.

273. ಲೋಕಬಾಹಿರರ=ಈ ಲೋಕಕ್ಕೆ ಹೊರಗಾದವರ (ನಕ್ಷತ್ರಾದಿಗಳ) ಸರೋಜಸಿ=ಕಮಲ; ಇಲ್ಲಿ-ಸೂರ್ಯನ ಪತ್ನಿ. ಅಂಬರ=ಆಕಾಶ, ಬಟ್ಟೆ. ಬಯಲಾಯ್ತು=ಕಾಳಾಯ್ತು. ಮಾಜಲು+ಏನು=ಮರಸುವ್ರದು ಯಾತಕ್ಕೆ. ಅಸುದೊರೆವನು=ಪ್ರಾಣಬಿಡುವನು. ಅಪರಾದ್ರಿಯಡರ್ದನು=ಪಶ್ಚಿಮಗಿರಿಯನ್ನು ಹತ್ತಿದನು. ಈ ಪದ್ಯದಲ್ಲಿ ಒಬ್ಬ ರಾಜನು ತನ್ನ ಸರ್ವಸ್ವವನ್ನೂ ಕಳದುಕೊಂಡು ಬೀದಿಬೀದಿ ತಿರುಗಿ ದುಃಖವನ್ನು ಸಹಿಸಲಾರದೆ ಚಟ್ಟದಿಂದ ನೀರಿಗೆ ಧುಮುಕಿ ಪ್ರಾಣಬಿಟ್ಟನೆಂಬ ಅರ್ಥವು ಸೂಚಿತವಾಗುತ್ತದೆ

274. ಪಡುವಲು=ಪಶ್ಚಿಮದಲ್ಲಿ. ಪಕ್ಕೆ=ಗೂಡು. ವಿಹಗಸಂತತಿ=ಹಕ್ಕಿಗಳ ಗುಂಪು. ಗಗನಾಂಗಣ=ಅಂತರಿಕ್ಷವೆಂಬ ಅಂಗಳ ಉರೆ=ಹೆಚ್ಚಾಗಿ. ಕೈರವ=ನೆಯ್ದಿಲೆ.

275. ಉಚಿತಸುಪ್ತಿಸಮೇತ=ತಕ್ಕಪಟ್ಟ ನಿದ್ರೆಯೊಡನೆ ಕೂಡಿರಲು ನಿಶಾಂತಯಾಮ=ರಾತ್ರಿಯ ಕಡೆಯಯಾಮ, ಬೆಳಗಿನಜಾಮ. ತಮ=ಕತ್ತಲೆ. ಆತಪ=ಬಿಸಿಲು. ಮಹಾತರಣಿ=ಮಹಾತ್ಮನಾದ ಸೂರ್ಯ ಭಗವಂತನೆ.

276. ಹೂಡಿದುವು=ಇಲ್ಲಿ-ತೆರೆದುವು. ಸಿರಿವನೆಯ=ಲಕ್ಷ್ಮಿಗೆ ಮನೆಯಾದ ತಾವರೆಯ; ಕಮಲಗಳು ಅರಳಿದುವು ಎಂದರ್ಥ. ಕೂಡಿವರೆದ=ಒಂದಾಗಿಸೇರಿದ. ಅಳಿಗಣ=ದುಂಬಿಗಳ ಗುಂಪು. ಸೆರೆಬಿಟ್ಟು-ಹಿಂದಿನರಾತ್ರಿ ಮಕರಂದಪಾನಮಾಡುವಾಗ ಸಂಕೋಚಿಸಿದ ತಾವರೆಗಳಲ್ಲಿ ಸಿಕ್ಕಿಬಿದ್ದು ಅವು ಅರಳಿದುದರಿಂದ ಈಗ ಸೆರೆಯಿಂದ ಬಿಡಲ್ಪಟ್ಟವಾಗಿ. ಚಕ್ರಗಳು=ಚಕ

ಕ್ರವಾಕ ಪಕ್ಷಿಗಳು. ಮೂಡವೆಣ್ಣಿನ = ಪೂರ್ವದಿಕ್ಕೆಂಬ ಹೆಂಗಸಿನ. ಚಂದಿರವಟ್ಟಿನಂತೆ = ಕುಂಕುಮದ ಬೊಟ್ಟಿನಂತೆ.

227. ಪ್ರಾಗಂಗನೆ = ಪೂರ್ವದಿಕ್ಕೆಂಬ ಹೆಂಗಸು. ಉದಯ.......... ವಿಷ್ಟರದಿ = ಪೂರ್ವಗಿರಿಯ ಕೊನೆಯೆಂಬ ಪೀಠದಲ್ಲಿ. ಈ ಪದ್ಯದಲ್ಲಿ ಸೂಚಿತವಾದ ತಾತ್ಪರ್ಯವೇನು ?

## 25. ಲಾಕ್ಷಾಗೃಹ ದಹನ.

278. ಶ್ರೇಣಿಕ = ವಾಲ್ಮೀಕಿಯು ರಾಮಾಯಣವನ್ನು ಲವಕುಶರಿಗೂ, ವೈಶಂಪಾಯನನು ಭಾರತವನ್ನು ಜನಮೇಜಯನಿಗೂ ಹೇಳಿದಂತೆ ಗೌತಮ ಗಣಧರನು ಜೈನಪುರಾಣಗಳನ್ನು ಶ್ರೇಣಿಕ ಮಹಾರಾಜನಿಗೆ ಹೇಳುತ್ತಾನೆ. ಗೂಢದಿ = ಗುಟ್ಟಾಗಿ. ಕನಕ = ಕನಕನೆಂಬ ಬಡಗಿ. ಬಾಳುವೆ = ಜೀವನ.

279. ಅನ್ನವರ = ಆ ದಿನವರೆಗೂ. ಎಡೆಯಾಡು = ಓಡಾಡು, ತಿರುಗಾಡು ಖಿಲ್ಲಿ = ಯುಕ್ತಿ. ಪಥದಲ್ಲಿ = ಅದೇ ಮಾರ್ಗದಲ್ಲಿ.

280. ದೇಸಿಗಿತಿ = ಪರದೇಶಿಯವಳು. ಹೊಳಲು = ಪಟ್ಟಣ. ತಳುವದೆ = ತಡಮಾಡದೆ.

281. ಅಂತರದಿ = ಅಂತಸ್ಸಿನಲ್ಲಿ. ವಿನುತೆ = ಸ್ತೋತ್ರಮಾಡಲ್ಪಟ್ಟ. ಅನಿಬರನು = ಎಲ್ಲರನ್ನು. ಸವೆದ = ಸಮೆದ, ಮಾಡಿದ.

282. ದೀವಿಗೆ.......ಬಳ = ದೀಪವು ಹೆಚ್ಚಾಗಿ ಉರಿದು ಅರಮನೆ ಹೊತ್ತಿಕೊಂಡಿತು ಎಂಬ ಸಂದೇಹವನ್ನು ಉಂಟುಮಾಡಿ.

283. ಹೊತ್ತಿತು = ಹತ್ತಿಕೊಂಡಿತು. ಕೇಸುರಿ = ಕೆಚ್ಚನೆ + ಉರಿ, ಕೆಂಪಾದ ಉರಿ ಹೀಗೆಯೇ ಕೇಸಕ್ಕಿ. ತ್ರಿಪುರ — ಹಿಂದೆ ತಾರಕ, ತಾರಕಾಕ್ಷ, ವಿದ್ಯುನ್ಮಾಲಿ ಎಂಬ ಮೂವರು ರಾಕ್ಷಸರು ಅಂತರಿಕ್ಷದಲ್ಲಿ ಹಾರುವ ಮೂರು ಪಟ್ಟಣಗಳನ್ನು ಕಟ್ಟಿಕೊಂಡು ಲೋಕವನ್ನೆಲ್ಲಾ ಪೀಡಿಸುತ್ತಿರಲು ಈಶ್ವರನು ವೈಷ್ಣವಾಸ್ತ್ರ ಪ್ರಯೋಗದಿಂದ ಆ ಪುರಗಳನ್ನು ಸುಟ್ಟನೆಂದು ಪುರಾಣ ಕಥೆ. ಕಡುಬೆಳಗೆ = ವಿಶೇಷವಾಗಿ ಪ್ರಕಾಶಿಸಲು.

284. ನಿಗಳ= ಕಾಲಸರಪಣಿ. ಗೋವೃಂದ=ಹಸುಗಳ ಮಂದೆ. ತೆವರಿದರು=ಅಪಹರಿಸಿಕೊಂಡರು; ಇಲ್ಲಿ-ಹಗ್ಗ ಕಳಚಿಬಿಟ್ಟರು ಪರಿಗ್ರಹ=ಊಳಿಗದ ಜನಗಳು.

285. ಬೆಳಸನಕ=ಬೆಳಗಾಗುವತನಕ. ಪಳೆಯರು=ವಂಶಪಾರಂಪರ್ಯವಾಗಿ ಊಳಿಗದಲ್ಲಿದ್ದ ಹಳೆಯ ಜನರು. ಮುರುಟಿದ=ಸುಕ್ಕಿಹೋಗಿದ್ದ ಆರುಂ ಪೆಣನ=ಆರು ಹೆಣಗಳನ್ನೂ. ಬಬ್ಬುಳಿಮಾಡಿ=ಒಂದಾಗಿ ಸೇರಿಸಿ

286. ದೀವಳಿಗೆಯಾ—ಷಷ್ಠ್ಯಗೆ ಕೆಲವುವೇಳೆ ದೀರ್ಘಾದೇಶವು ಉಂಟು. ಇಹನ್ನೆವರ=ಇಹ+ಅನ್ನೆವರ, ಇರುವಷ್ಟರೊಳಗೆ.

287. ನೇಸರು=ಸೂರ್ಯ. ಬಿನ್ನವತ್ತಳೆ=ತ್ಸ-ವಿಜ್ಞಾಪನ ಪತ್ರಿಕೆ. ಒಡ್ಡೋಲಗ=ಸಭೆ.

288. ರಾಯಸಿಗ=ರಾಜಶಾಸನವನ್ನು ಬರೆವವನು. ಓಲೆಯ=ಕಾಗದವನ್ನು. ವಕ್ಕಣೆ=ಕಾಗದದಲ್ಲಿ ಬರೆದಿರುವ ಸಮಾಚಾರ. ಎದೆಗೆಡಲು ಧೈರ್ಯಕುಂದುವಹಾಗೆ.

289. ಸುರನದೀಸುತ=ಭೀಷ್ಮ; ಅವಯವಾರ್ಥವೇನು? ಅಂಧನೃಪತಿ=ಧೃತರಾಷ್ಟ್ರ. ಗರುಡಿಯಾಚಾರ್ಯ=ದ್ರೋಣ. ಹೂಸಕ=ಕೃತ್ರಿಮ ಕರುಣಾರಸವನು=ದುಃಖವನ್ನು.

290. ಕೌಂತೇಯರನು=ಕುಂತಿಯ ಮಕ್ಕಳಾದ ಪಾಂಡವರನ್ನು.

291. ಮರೆವನು+ಎಂತು+ಅಂತಕನು. ಯಮನು ತನ್ನಮಗನಾದ ಧರ್ಮರಾಜನನ್ನು ಹೇಗೆತಾನೆ ಮರೆವನು? ಹಾಗೆಯೇ, ಶಕ್ರನು=ಇಂದ್ರನು. ಅರ್ಜುನನನ್ನೂ; ಅಂಜನೆಯ ಗಂಡನು=ಅಂಜನಾದೇವಿಯ ಪತಿಯಾದ ವಾಯುದೇವನು ಭೀಮಸೇನನನ್ನೂ ಹೇಗೆ ಮರತಾನು? ಆಜಿ=ಯುದ್ಧ. ಅವ=ವಾಯುದೇವನು. ಬರೆಯನುರ್ಚಲದೇಕೆ=ಬರೆಯಿಂದ ಕತ್ತಿಯನ್ನು ಹಿರಿವುದು ಏಕೆ? ಬೆರಸಿಪು=ಒಳಗೆ ಸೇರಿಸಿಡು.

292. ನಗವ=ಪರ್ವತವನ್ನು, ವಿದ್ಯೋನ್ಮತ್ತ=ವಿದ್ಯಾಗರ್ವದಿಂದ ಕೊಬ್ಬಿದ. ಎತ್ತಿಬರೆ=ದಂಡೆತ್ತಿ ಅಡ್ಡಗಟ್ಟಿ ನಿಲ್ಲಲು. ಅಂತಕ

ವದನದಲಿ = ಯಮನ ಬಾಯಲ್ಲಿ. ತುತ್ತಿದನು ತುತ್ತಾಗಿ ಮಾಡಿದನು, ಎಂದರೆ ಸಂಹರಿಸಿದನು.

## 72. ವಾಲಿರಾವಣರ ಸಂಗ್ರಾಮ.

**ಸೂಚನೆ:** ಕೊಳುಗುಳ=ಯುದ್ಧರಂಗ. ಪಿಡಿವಡೆದು=ಸಿಕ್ಕುಬಿದ್ದು. ಆಳವಳಿದು=ಶಕ್ತಿಗುಂದಿ. ಸಾಮದಲಿ=ಸಾಮೋಪಾಯದಿಂದ. ಕೆಳೆಗೊಂಡನು=ಸ್ನೇಹಮಾಡಿಕೊಂಡನು.

293. ಅದಟು=ಪರಾಕ್ರಮ.

294. ಜಿತಸುರನರೋರಗಭುವನ=ದೇವಲೋಕ, ಭೂಲೋಕ, ಪಾತಾಳಲೋಕಗಳನ್ನು ಜಯಿಸಿದ

295. ಆಖ್ಯ=ಹೆಸರುಳ್ಳ. ಸುರದಲ್ಲಣ=ಸುರರಿಗೆ ಭಯವನ್ನುಂಟುಮಾಡುವವ ರಾವಣ; ಬಿರುದುಗಳಲ್ಲಿ ಅರಿಸಮಾಸದೋಷವಿಲ್ಲ.

296. ನಿಶಾಚರ=ರಾತ್ರಿಯಲ್ಲಿ ಸುಳಿವವನು (ರಾಕ್ಷಸ) ಪ್ಲವಂಗ........ಮಣಿ=ಕಪಿಕುಲಶ್ರೇಷ್ಠನಾದ ವಾಲಿ.

297. ಅಪಬಳ=ಮಾಂಸ; ಇಲ್ಲಿ-ಕಬಳ, ಗ್ರಾಸ. ಝಂಕಿಸು=ಧಿಕ್ಕರಿಸು. ಅರ್ಣವ=ಸಮುದ್ರ. ಅಭ್ರಪಥ=ಮೇಘಮಾರ್ಗ, ಆಕಾಶ.

298. ಮಾರ್ತಾಂಡ=ಸೂರ್ಯ. ಆಖಂಡಲಸುತ=ಇಂದ್ರನ ಮಗ (ವಾಲಿ) ಪದ........ಚಮತ್ಕೃತಿಯ=ಸದ್ದಾಗದೆ ಹೆಜ್ಜೆಯಿಡುವ ಚಮತ್ಕಾರವಾದ ನಡಗೆಯನ್ನು.

299. ಚೆನ್ನದಲಿ=ಸೊಗಸಾಗಿ. ಶೌಚವ್ರತ=ಕಾಲುತೊಳದುಕೊಳ್ಳುವುದು ಮೌನಮುದ್ರೆಯಲಿ=ತವನಾಡದೆ.

300. ಕಂಡು+ಅರಿಭಯಂಕರ. ಬರಸೆಳೆದು=ಸಮೀಪಕ್ಕೆ ಬರುವಂತೆ ಎಳದುಕೊಂಡು ಕಕ್ಷದಲಿ=ಕಂಕುಳಲ್ಲಿ. ನಿಟ್ಟಿಸು=ನೋಡು. ಮಿಂದು=ಸ್ನಾನಮಾಡಿ; ಧಾ-ಮೀ.

301. ವಿಧ್ಯುಕ್ತದಲಿ=ಶಾಸ್ತ್ರದಲ್ಲಿ ಹೇಳಿರುವ ಮೇರೆ.

302. ಬಡಗಣ=ಉತ್ತರದಿಕ್ಕಿನ. ಫಣಿಪನ=ಹಾವನ್ನು. ಖಗೇಂದ್ರನಂತೆ=ಪಕ್ಷಿಶ್ರೇಷ್ಠನಾದ ಗರುಡನ ಹಾಗೆ. ಬಿಡುದಲೆಯ=ಒಂದರಿಂದ ಒಂದಗಲಿರುವ ತಲೆಗಳುಳ್ಳ. ನಿಡುದೋಳಗಳ=ಉದ್ದವಾದ ಕೈಗಳುಳ್ಳ. ಜೋಲ್ವೊಡಲ=ನೇತಾಡುತ್ತಿರುವ ಮೈಯುಳ್ಳ. ಸುರರಿಪು=ದೇವವೈರಿಯಾದ ರಾವಣನು. ಅಡಸುತೆ=ಕೈಗೆ ಅಡಕವಾಗುವಂತೆ ಬಿಗಿಯಾಗಿ ಹಿಡಿದುಕೊಂಡು. ಫಲಿತ....ಕುಜದಂತೆ=ಹಣ್ಣು ಬಿಟ್ಟ ಹೊಸಮಾವಿನ ಮರದಂತೆ; ಇಲ್ಲಿ—ಯಾವ ಯಾವುದನ್ನು ಯಾವ ಯಾವುದಕ್ಕೆ ಹೋಲಿಸಿದೆ?

303. ಓಸರಿಸದೆ=ಓರೆಯಾಗದೆ, ಹಿಂದೆಗೆಯದೆ ಕಪಿ....ಪೊಯ್ಲಿನಲಿ=ವಾಲಿಯು ಕಾಲೆಂಬ ವೃಕ್ಷದಿಂದುಂಟಾದ ಗಾಳಿಯ ಪೆಟ್ಟಿನಿಂದ.

304. ಅಗಣಿತ=ಲೆಕ್ಕವಿಲ್ಲದ, ಅನೇಕವಾದ.

305. ನುಸುಳಿ=ಜಾರಿಕೊಂಡು. ಬೆಂಗೆ+ಅಡಗಿ=ಬೆನ್ನುಕಡೆಗೆ ಮರೆಸಿಕೊಂಡು. ಮುರಿದು=ಹಿಂದಿರುಗಿ. ನಗೆಯಾಗೆ=ನಗುಉಂಟಾಗಲು, ನಸುನಗುತ್ತ.

306. ದಶಾಕೃತಿಯನು=ಮತ್ಸ್ಯಕೂರ್ಮಾದಿ ದಶಾವತಾರಗಳನ್ನು. ತವ ಸಾಹಸಕ್ಕೆ=ನಿನ್ನ ಸಾಹಸಕ್ಕೆ. ಐದಿಸೆನ್ನೊಳು ಮಿತ್ರಭಾವವ=ನನ್ನಲ್ಲಿ ಸ್ನೇಹವನ್ನು ಬೆಳಯಿಸು.

307. ಶತಯಾಗಸುತನು=ಇಂದ್ರನ ಮಗನಾದ ವಾಲಿ. ಕೃಶಾನುವನು ಅಗ್ನಿಯನ್ನು. ಮನ್ನಿಸಿ+ಆ+ಗಭೀರಪರಾಕ್ರಮನು.

## 27. ಲಂಕಾದಹನ.

308. ತ್ರಿದಶಾಧಿಪರಿಪು=ಇಂದ್ರಜಿತ್ತು; ಹೇಗೆ? ಬೆರಸು=ಸಹಿತ. ಅನಿಲಸುತ=ಹನುಮಂತ; ಹೇಗೆ? ಕೈವೀಸು=ಯುದ್ಧಮಾಡಲು ಅಪ್ಪಣೆ ಮಾಡು. ಉಕ್ಕಡ=ಆಸಕ್ತಿ, ಉಲ್ಲಾಸ; ಅರ್ಥಾಂತರ—ಕೃತ್ರಿಮ.

309. ತರತರದಿಂ=ವರಿಸೆಯಾಗಿ, ನಿಶಿತಾಯುಧ=ಹರಿತವಾದ ಅಸ್ತ್ರಗಳು. ಅರವರಿಸದೆ=ತಡೆಮಾಡದೆ. ಉರವಣೆ=ಮುಂದಾಗಿ ನುಗ್ಗುವಿಕೆ. ಕುಹರ=ಬಿಲ. ದನುಜಕಬಂಧ=ರಾಕ್ಷಸರ ಅಟ್ಟೆಗಳು, ತಲೆಯಿಲ್ಲದ ಮುಂಡಗಳು, ಮಹಾವೀರರ ಮುಂಡಗಳು ತಲೆಹೋದರೂ ಸ್ವಲ್ಪಹೊತ್ತು ಕುಣಿಯುತ್ತಿರುವುವು.

310. ಸೆಡೆವುದ=ಭಯಪಡುವುದನ್ನು, ಮಸಗಿ=ರೇಗಿ. ರಕ್ಕಸರಾವುತರು=ರಾಕ್ಷಸ ಸವಾರರು. ಪಾರದೆ ಸೆರಗಂಬಡೆಗಂ=ತನಗುಂಟಾಗಬಹುದಾದ ಅಪಾಯವನ್ನೂ ಲಕ್ಷ್ಯಮಾಡದೆ. ಮಹಿಷಾಸುರಂ=ಚಾಮುಂಡಿಯಿಂದ ಸಂಹರಿಸಲ್ಪಟ್ಟ ಮಹಿಷಾಸುರನ ಹಾಗೆ. ಪೆರ್ಗೊಂಬಿಂ=ದೊಡ್ಡ ರೆಂಬೆಯಿಂದ, ದೊಡ್ಡ ಕೊಂಬಿನಿಂದ. ನುರ್ಗಪ್ಪಿನೆಗಂ=ಜಜ್ಜಿಹೋಗುವ ಹಾಗೆ. ತವಿಸಿದಂ=ನಾಶಮಾಡಿದನು; ಧಾ.—ತವು, ಕ್ಷಯೇ.

311. ಅಂಬಿನ=ಬಾಣದ. ಕಡಗಿ=ಉತ್ಸಾಹದಿಂದ. ಪಾವನಿ=ಹನುಮಂತ. ಶಕಟಾಸುರ—ಹಿಂದೆ ಕೃಷ್ಣನು ಬಂಡಿಯ ಆಕಾರದಲ್ಲಿ ಬಂದ ಶಕಟನೆಂಬ ರಾಕ್ಷಸನನ್ನು ಕೊಂದ ಹಾಗೆ. ಮುಕ್ಕಡಿಮಾಡು=ಮೂರು+ಕಡಿ ಮಾಡು=ಮೂರು ತುಂಡು ಮಾಡಿಹಾಕು.

312. ಕುಲಗಿರಿಗಳು=ಏಳು ಕುಲಪರ್ವತಗಳು. ಜೋದರು=ಕಾಲಾಳುಗಳು. ಮಾಹುತರು=ಮಾವಟಿಗರು. ಕೊಲೆಗಡಿಗಾನೆಗಳು=ಶತ್ರುಗಳನ್ನು ಕೊಂದುಹಾಕುವ ಆನೆಗಳು. ಮೂವಳಸಿ ಮುತ್ತೆ=ಮೂರು ಸುತ್ತಾಗಿ ಸುತ್ತಿಕೊಳ್ಳಲು; ಮೂರು+ಬಳಸು=ಮೂವಳಸು. ನಿಜ=ತನ್ನ. ಹರಿನಾಮಂ=ಹರಿಯೆಂಬ ಹೆಸರು; ಹರಿ ಎಂದರೆ ಸಿಂಹಕ್ಕೂ ಕಪಿಗೂ ಸಹ ಹೆಸರು. ಅನ್ವರ್ಥಂ=ಅರ್ಥಕ್ಕೆ ಅನುಸಾರವಾದುದು. ಬಲಿಮುಖಚಿಹ್ನಂಗೆ=ಕಪಿಧ್ವಜನಿಗೆ ಹನುಮಂತನೇ ಮೊದಲಾದವರೆಲ್ಲಾ ಧ್ವಜದಲ್ಲಿ ಕಪಿಚಿಹ್ನವುಳ್ಳ ಒಂದು ಜಾತಿಯ ಜನರೆಂದು ಜೈನರು ನಂಬುತ್ತಾರೆ.

313. ಕೋಪಾಟೋಪ—ಕೋಪದ ರಭಸ. ಇಂದಗಿ—ಇಂದ್ರಜಿತ್ತು. ಕಪಿಕೀಟಕ—ಕಪಿಗಳಲ್ಲಿ ಹುಳುವಂತಿರುವ ನೀಚನೆ. ವಿಧುಂತುದನ—ಚಂದ್ರನನ್ನು ನುಂಗುವ ರಾಹುವಿನ; ಇಲ್ಲಿ—ಕೀಟಕ ವಿಧುಂತುದ; ಈ ಪದಗಳ ಔಚಿತ್ಯವೇನು ? ಅಣುವೆ—ದ್ಭ— ಹನುಮಂತ.

314. ಪರಿಭವ—ತಿರಸ್ಕಾರ, ನಿಂದೆ. ಅಲಸದೆ—ಸೋಮಾರಿತನ ಪಡದೆ, ಆತುರಿಸಿ. ಮಲಿನಾಶಯ—ದುರಭಿಪ್ರಾಯವುಳ್ಳ. ಪಲಲಾದ— ಮಾಂಸವನ್ನು ತಿನ್ನುವ ರಾಕ್ಷಸ. ನಿಪ್ಪಸರದಲ್ಲಿ—ರಭಸದಿಂದ; ಇಲ್ಲಿ—ಕ್ಷಿಪ್ರಪಲ್ಲಿ, ಜಾಗ್ರತೆಯಾಗಿ.

315. ಕೂರಂಬು+ಕೂರಿತ್ತು+ಅಂಬು, ಮೊನೆಯಾದ ಬಾಣ. ತೊಟ್ಟು—ಸಂಧಾನಮಾಡಿ ತಚ್ಛರ—ತತ್+ಶರ, ಆ ಬಾಣ. ಕನಲ್ದು—ಕೋಪಿಸಿಕೊಂಡು. ಬಲ್ಸರಿ—ಬಲವಾದ ಮಳೆ. ಇನ್ನರ್—ಇಂಥವರು.

316. ತ್ರಿದಶಾಧಿಪನ+ಇಭಕುಂಭಸ್ಥಳಮಂ—ಇಂದ್ರನ+ಐರಾವತದ ಕುಂಭಸ್ಥಳವನ್ನು. ವಿದಳಿಸಿದ—ಸೀಳಿದ. ತೋದಳ್—ಸುಳ? ಹುಲುಗಪಿ—ಹುಲ್ಲಿನಂತೆ ಅಲ್ಪನಾದ ಕಪಿಯು. ನಾಣ್ಣುತ್ತಿರ್ದಪವು—ನಾಚಿಕೆ ಪಡುತ್ತಿವೆ. ಸಿಚ್ಚಟಗಲಿ—ಸಿಚ್ಚಲ ಪರಾಕ್ರಮಿ. ಆರುತ್ತಿರೆ—ಗರ್ಜಿಸುತ್ತಿರಲು.

317. ವರುಣಸುತರಿಗೊದಪಿದ—ಇಲ್ಲಿ—ಪೂರ್ವಕಥೆಯೇನು ?

318. ಅವಿರಳವೆನಿಸಿದ—ದಟ್ಟವಾದ. ಬಾಂಧವತೆ—ನಂಟು. ಬವರ—ಯುದ್ಧ.

319. ವಜ್ರಮುಖನ—ವಜ್ರಮುಖನೆಂಬ ರಾಕ್ಷಸನ. ವನಭಂಗವ—ಅಶೋಕವನಭಂಗವನ್ನು. ಜಾನಕಿಯ—ಜಾನಕಿಗೆ ಇಷ್ಟವಾದ ಅನುವರ—ಯುದ್ಧ,

320. ಧಾರಿಣೀಚರರು—ರಾಮಲಕ್ಷ್ಮಣರು. ಜೈನರು ರಾವಣನೇ ಮೊದಲಾದವರನ್ನು ಖಚರರೆಂದೂ ರಾಮಾದಿಗಳನ್ನು ಭೂಚರರೆಂದೂ ನಂಬುತ್ತಾರೆ. ಭುಜಪರಿಘ—ಲಾಳಮುಂಡಿಗೆಯು

ಹಾಗಿರುವ ತೋಳು. ಈ ಪದದೊಳ್—ಈ ಸನ್ನಿವೇಶವಲ್ಲಿ, ಕಾವರ್=ಕಾಪಾಡುವವರು. ಮಾರಣಮಂ ಮರಣವನ್ನು. ವಿನಾಶಕಾಲದೊಳಾರ್ಗಂ ಮತಿಕಿಡುಗುಂ—"ವಿನಾಶಕಾಲೇ ವಿಪರೀತಬುದ್ಧಿಃ" ಎಂಬ ಗಾದೆಯ ಭಾಷಾಂತರ.

321. ಪಕ್ಕಾದ=ಆಶ್ರಯವಾದ. ಅಸದಾಗ್ರಹ=ದುರಾಗ್ರಹ, ಕೆಟ್ಟ ಅಭಿಪ್ರಾಯ. ಮೃತಿ=ಮರಣ. ಹತಿಯಿಸುವೆನು=ಕೊಲ್ಲುವೆನು. ಭ್ರೂಕುಟಿಮುಖ=ಹುಬ್ಬು ಗಂಟುಹಾಕಿದ ಮುಖವುಳ್ಳ.

322. ಬೆಸಸಿಲ್ಲದೆ=ಆಜ್ಞೆಯಿಲ್ಲದೆ. ಇಂದಗಿಗಿಂದಗಿ—ಧಿಕ್ಕಾರವನ್ನು ತೋರಿಸುವುದಕ್ಕಾಗಿ ಈ ರೀತಿಯಲ್ಲಿ ಅನುಕರಣಪದಗಳನ್ನು ಸೇರಿಸುವುದುಂಟು. ಉದಾ:="ಸುರಗಿರರ ಮಾಡಲ್ಲ."

323. ತತ್ಪ್ರತಿವಿದ್ಯೆ=ಅದಕ್ಕೆ ಪ್ರತೀಕಾರಮಾಡುವ ವಿದ್ಯೆ. ವಿದ್ಯಾಧರ=ಒಂದು ಜಾತಿಯ ಯಕ್ಷರು. ಪ್ರಥಮಾಬಹುವಚನಾರ್ಥದಲ್ಲಿ ಪ್ರಕೃತಿ ಪ್ರಯೋಗಮಾಡಿದೆ.

324. ರಸೆ=ಭೂಮಿ. ಉರಲಿಂಗಂ=ಲಿಂಗಾಕಾರವಾದ ಉರಿ. ವಿಲೋಚನ=ಕಣ್ಣು. ದಳ್ಳಿಸು=ಜಾಜ್ವಲ್ಯಮಾನವಾಗು. ಮುಸುಳಿಸು=ಕಾಂತಿಹೀನವಾಗಿ ಮಾಡು ಮಾರಾಂತವರಂ=ಎದುರುಬಿದ್ದವರನ್ನು ಪಸಿದ=ಹಸಿದ, ಹಸಿವಿನಿಂದ ಕಂಗೆಟ್ಟ. ಗೆಯ್ತ=ಕೆಲಸ. ಲಂಘಿಸಿದ=ಹಾರಿದ.

325. ತಸಿಗಿಚ್ಚು=ಕ್ರೂರವಾದ ಅಗ್ನಿ. ಪಾವಕವಿದ್ಯೆ=ಅಗ್ನಿವಿದ್ಯೆ.

326. ಉತ್ಪಾತಪ್ರಸರ=ಕೇಡಿಗೆ ಉಂಟಾಗುವ ಅಪಶಕುನಗಳ ಸಮೂಹ. ಧೂಮಸ್ತೋಮ=ಹೊಗೆಯ ಹೊರಳಿ. ತತ್ಕೇತು=ಧೂಮಕೇತು. ದಿಗ್ದಾಹ=ದಿಕ್ಕುಗಳು ಹೊತ್ತಿಕೊಳ್ಳುವುದು. ಆವರಿಸು=ವ್ಯಾಪಿಸು. ಅಸದಳ=ಸಹಿಸಲು ಅಸಾಧ್ಯ. ಉಲ್ಕಾಪಾತ=ಅಂತರಿಕ್ಷದಿಂದ ಕೆಂಡಗೊಳ್ಳಿ ಬೀಳುವುದು ಇದೊಂದು ಉತ್ಪಾತ.

327. ಚರಮಸಮಯ=ಕಡೆಗಾಲ. ಅರುಣಾರ್ಕ=ಕೆಂಪಾದ ಸೂರ್ಯ. ಸುರಗಿರಿ=ಮೇರುಪರ್ವತ.

328. ಬೆಳುಗೊಡೆ=ಶ್ವೇತಚ್ಛತ್ರ. ಚಮರೀರುಹ=ಚೌರಿ. ವಿಳರ್ವ= ಅಲುಗುವ. ಪತಾಕೆ=ಬಾವುಟ. ಮಕರ=ಮೊಸಳೆ, ಬಿರು ದಿಗೆ ಹಿಡಿದುಕೊಳ್ಳುವ ಲೋಹಮಯವಾದ ಮೊಸಳೆ. ಬಲ ಮುರಿಶಂಖ=ಸುಳಿ ಬಲಗಡೆಗೆ ಸುತ್ತಿರುವ ಶಂಖ.

329. ಬಿರಿತು—ಬಲವಾಗಿ.

330. ಭುವನದ.......—ಈ ಷಷ್ಠಿಗಳಿಗೆಲ್ಲಾ 'ದಿವಿಜಾಗಾರಂಗಳು. ಎಂಬಲ್ಲಿ ಅನ್ವಯ. ಭುವನದ ಅಗಾರ=ಬೆಚ್ಚಲುಮನೆ. ಕೋ ಶದ ಅಗಾರ=ಬಂಡಾರ. ಪ್ರೇರಿತ=ಗಾಳಿಯಿಂದ ನಡೆಸಲ್ಪಟ್ಟ ಸಾಮೋದ್ಭವಶಾಲೆ = ಆನೆಯ ಶಾಲೆ. ಅವಿರಳ.......ಕಾ ಸಾರದೊಳ್=ಸರ್ವದಾ ಸುರಿಯುತ್ತಿರುವ ಮದಜಲದಿಂದುಂ ಟಾದ ಕೊಳದಲ್ಲಿ. ಅವಗಾಹದಿ=ನೀರು ಮುಳುಗಿ. ಗಜಘಟೆ ಯಂ=ಆನೆಯ ಸಮೂಹವನ್ನು. ಮಗ್ನಿಸಿದಂ=ನಾಶಮಾಡಿ ದನು.

331. ಆಲಾನ=ಆನೆಯನ್ನು ಕಟ್ಟುವ ಗೂಟ. ಕೆನ್ನಂ=ವಿಶೇಷವಾಗಿ. ಪರಿಪಡೆ=ಮುರಿದುಹೋಗುವ ಹಾಗೆ. ಮುಂಡಾಸನದಿಂದಂ= ಒಂದು ವಿಧವಾದ ಆಸನದಿಂದ.

332. ಮಂದುರಾ=ಕುದುರೆಯ ಲಾಯ. ವಾಹಕರು=ಸವಾರರು. ಜ್ವ ಲನ=ಬೆಂಕಿ. ಮುಂಡಿಗೆ=ಕುದುರೆ ಕಟ್ಟುವ ಗೂಟ. ಪಾಳಾ ಸ=ಮುತ್ತುಗದ ಮರದಿಂದ ಮಾಡಿದ ಗೂಟ. ಬಿಸಿಲ್ಗುದುರೆ =ಮೃಗತೃಷ್ಣೆ. ಅಬಳಾಬಾಳಕ ಜಾಳಕ=ಹೆಂಗಸರು, ಮಕ್ಕಳು ಇವರ ಗುಂಪು.

333. ನಿಟ್ಟೊಡಲು=ನಿಡಿದು+ಒಡಲು, ಉದ್ದವಾದ ಮೈ. ನಿಡುಗೋ ಣು=ಉದ್ದವಾದ ಕತ್ತು. ಅಳವಟ್ಟ=ವಶವಾದ. ಒಟ್ಟೆ=ದ್ವ. ಉಷ್ಟ್ರ, ಒಂಟೆ. ಒಟ್ಟಜೆ=ಗೌರವ. ಪಣ್ಣದೆ=ಮಾಡದೆ. ಕಟ್ಟಾಸುರವಾಗಲ್=ಬಹು ಭಯಂಕರವಾಗಲು.

334. ತೋರಣ=ಹೊರಬಾಗಿಲು. ಇಕ್ಕೆಲದ=ಎರಡು ಪಾರ್ಶ್ವಗಳ ಲ್ಲಿರುವ, ಆಪಣ ಅಂಗಡಿ. ಪಸರ, ಮಾರ್ಕೆಟ್ಟು. ಮಾಲಾ

ಕಾರರಕೇರಿ ‖ ಹೂವಾಡಿಗರ ಬೀದಿ. ಮಣಿಗಾರರು=ರತ್ನಪಡಿಯ ವ್ಯಾಪಾರಗಾರರು. ಗಣಿಕವಾಟ=ಸೂಳೆಗೇರಿ. ಮುದುಗುಂಟಣಿ=ಸೂಳೆಯ ಮನೆಯಲ್ಲಿರುವ ತಾಯಿ ಮುದುಕಿ. ನರೆಮುಡಿ=ನರೆತುಹೋದ ಕೂದಲು.

335. ಪಳಿಯ=ವಸ್ತ್ರ. ಇಂದಗಿಮೆಚ್ಚು=ಇಂದ್ರ ಚಿತ್ತು ಒಪ್ಪಿದ ಬಟ್ಟೆ. ಈಗ ಇಂಗ್ಲಿಷು ವರ್ತಕರು "ಗ್ಲಾಡ್‌ಸ್ಟನ್ ಪೆಟ್ಟಿಗೆ" "ವಿಕ್ಟೋರಿಯಾ ಬಂಡಿ, ಎಂದು ಹೆಸರಿಡುವಂತೆ ಹಿಂದೆ ಈ ದೇಶದ ವರ್ತಕರೂ ತಮ್ಮ ತಮ್ಮ ರಾಜರ ಹೆಸರಿನ ಮೇರೆ " ರಾವಣಮೆಚ್ಚು" "ಮಂಡೋದರಿ ಮೆಚ್ಚು" ಎಂದು ಪದಾರ್ಥಗಳಿಗೆ ಹೆಸರಿಡುತ್ತಿದ್ದರು. ಬಳ್ವಳನೆ=ಹೆಚ್ಚಾಗಿ. ದೂಸಿಗರು=ಜವಳಿ ವ್ಯಾಪಾರಿಗಳು.

336. ಮಲಯಜ=ಚಂದನ. ಮೃಗಮದ=ಕಸ್ತೂರಿ. ಹಿಮ=ಪಚ್ಚಕರ್ಪೂರ. ಬಾವನ್ನ=ಶ್ರೀಗಂಧ, ಸಾಂದು=ಸಾದು.

337. ಸಾಮಂತರು=ಅಧೀನರಾಜರು. ಸಾಹಣಿನಾಯಕ=ಆನೆಯ ಲಾಯದ ಯಜಮಾನ. ಸಾವಾಸಿ=ಸಹವಾಸಿ ಪಪಪ=ಎಲೆಯಡಕೆಯ ಚೀಲ. ವಣಿಜ=ವರ್ತಕ. ಕಾರುಕ=ಶಿಲ್ಪಿ. ಪಸಾಯಿತ=ಅಲಂಕಾರಮಾಡುವವ.

338. ಹವಣುಗಳೆದ=ಲೆಕ್ಕವನ್ನು ಮಿಕ್ಕ, ಅತ್ಯಧಿಕವಾದ. ಲೋಹಿತ=ಕೆಂಪಾದ. ಅವ್ವಳಿಸುವ=ಆತುರದಿಂದ ಏಳುತ್ತಿರುವ.

339. ವಾರುಣವಿದ್ಯೆ=ಮಳೆಯನ್ನು ಉಂಟುಮಾಡುವ ವಿದ್ಯೆ.

340. ಖರ್ವ=ಹಬ್ಬಲು.

341. ಕುಟ್ಮಲ=ಮೊಗ್ಗು. ಘಟಿತ=ಸೇರಿದ. ತುಳಿಲ್ಗೆಯ್=ನಮಸ್ಕಾರಮಾಡು.

342. ಮುದಶ್ರು ಆನಂದಬಾಷ್ಪ. ಕುಳಿಕೊರ್ಗಿಡೆ=ತಂಪು ಉಂಟಾಗಲು.

## 28. ಚಂದ್ರಹಾಸನ ಬಾಲ್ಯ.

343. ಬರೆವೆನು=ಹೇಳುವೆನು. ಬ್ಬಲಿಸು=ಕೇಳು, ಧಾರ್ಮಿಕ=ಧರ್ಮ

ಮಾರ್ಗದಲ್ಲಿ ನಡೆವವನು. ಸನ್ನುತ.......ಯಂ=ಸಜ್ಜನರಿಂದ ನುತಿಸಲ್ಪಟ್ಟ ಗುಣಗಳ ಆವಿರ್ಭಾವವುಳ್ಳವನು ಎಡದಂಘ್ರಿ= ಎಡದ+ಅಂಘ್ರಿ ಎಡಗಾಲು. ಅರುವೆರಳ್=ಆರು+ಬೆರಳ್. ದಿವದೊಳು=ಹಗಲಿನಲ್ಲಿ. ಅರಿಷ್ಟಾಂಶದೊಳ್=ಕೊನೆಯ ಪಾದದಲ್ಲಿ.

344. ಪುತ್ರೋತ್ಸವ=ಜಾತಕರ್ಮ. ಕ್ಷತ್ರಧರ್ಮ=ರಾಜರಿಗೆ ಯೋಗ್ಯವಾದ ಧರ್ಮ; ಇಲ್ಲಿ-ಯುದ್ಧಕಾರ್ಯ. ಚಿತ್ರಭಾನು= ಅಗ್ನಿ. ಶತಪತ್ರಲೋಚನೆ=ಕಮಲದ ಹಾಗೆ ಕಣ್ಣುಳ್ಳವಳು; ಇಲ್ಲಿ-ರಾಣಿ. ಅಹಿತರು=ಶತ್ರುಗಳು.

345. ತೊಳಲಿ=ಸುತ್ತಿ. ಅರ್ಭಕ=ಶಿಶು. ಎಳಯಂಗೆ=ಮಗುವಿಗೆ. ತಿರಿದು=ಯಾಚಕಮಾಡಿ, ಬೇಡಿ. ಪಸುಳೆ=ಮಗು. ಅಭಿನಯ=ಇಲ್ಲಿ—ಮಕ್ಕಳು ಮಾಡುವ ಚೇಷ್ಟೆಗಳು. ಆರ್ತೆಯಾಗಿ=ದುಃಖದಿಂದ ಬಡವಾಗಿ.

346. ಪೊಂದೊಡಿಗೆ=ಹೊನ್ನ ಒಡವೆ. ನಿಳಯ=ಮನೆ. ಕುಡಿವಾಲ್= ಕುಡಿವ ಹಾಲು.

347. ಮೊಳವಲ್ಲು=ಮೊಳವ+ಹಲ್ಲು. ಪಟ್ಟಡಿ=ಪಟ್ಟಿತ್ತು+ಅಡಿ, ಒತ್ತೊತ್ತಾಗಿ ಇಡುವ ಹಜ್ಜೆ. ಮಿಸು=ಮಿಸುಗುವ, ಪ್ರಕಾಶಿಸುವ, ನುಣ್ಗದಪು=ನುಣ್ಣಿತ್ತು+ಕದಪು, ನಯವಾದ ಕೆನ್ನೆ. ಚೆಲ್ವಪಣೆ=ಚೆಲುವಾದ ಹಣೆ. ಸುಳಿನಾಭಿ=ಸುಳಿಯ ಹಾಗಿರುವ ಹೊಕ್ಕುಳು. ಅಧರ=ತುಟಿ. ಬಟ್ಟದೊಡೆ=ಬಟ್ಟಿತ್ತು+ತೊಡೆ, ದುಂಡುದೊಡೆ. ನಳಿತೋಳು=ಮೃದುವಾದ ತೋಳು. ಇಡಿದ=ತುಂಬಿಕೊಂಡಿರುವ ಅಜಸ್ರಂ ಸರ್ವದಾ.

348. ರುಜೆ=ರೋಗ. ಕಾಲನ=ಯಮನ. ನಿರಾಲಂಬ=ಆಶ್ರಯವಿಲ್ಲದಿರುವಿಕೆ. ಎಲ್ಲರ್ಗೆ=ಎಲ್ಲರ. ಕಾರುಣ್ಯಕ್ಕೆ=ದಯೆಗೂ. ಈಡಾದನು=ಪಾತ್ರನಾದನು.

349 ದೇಶಿಕನಾಗಿ=ಪರದೇಶಿಯಾಗಿ. ಅಬಲೆಯರು=ಹೆಂಗಸರು. ಪ್ರೈಲ್ಯ=ತಿನ್ನಲು ಯೋಗ್ಯವಾದ. ತನಿವಣ್ಣ=ಕಳಿತ ಹಣ್ಣುಗ

ಳನ್ನು. ಸೊಲ್ವ=ಹೇಳುವ. ಮೆಲ್ಲಾಸು=ಮೆಲ್ಲಿತ್ತು+ಹಾಸು, ಮೆತ್ತಗೆ ಇರುವ ಹಾಸಿಗೆ. ಅಳ್ತೆ=ಪ್ರೀತಿ.

350. ಪರಪುಟ್ಟ=ತ್ಸ.—ಪರಪುಷ್ಟ, ಇತರರ ಲಾಲನ ಪಾಲನೆಯಲ್ಲಿ ಬಳೆದವನು. ಗಣಿಕೆಯರ್=ಸೂಳೆಯರು. ತೀಡಿ=ಇಲ್ಲಿ—ಮೈಗೆ ಸವರಿ. ಕತ್ತುರಿ=ತ್ಸ.—ಕಸ್ತೂರಿ. ಕಮ್ಮಲರ್=ಕಮ್ಮಿತ್ತು+ಅಲರ್, ವಾಸನೆಯಾದ ಹೂ. ಕಪ್ಪುರ=ತ್ಸ.—ಕರ್ಪೂರ. ವೀಳಯ=ಎಲೆಯಡಕೆ. ಮಡಿತೊಡಿಗೆ=ವಸ್ತ್ರಾಭರಣಗಳು.

351. ಅಚ್ಚರಿ=ತ್ಸ.—ಆಶ್ಚರ್ಯ. ನಾಡೆ=ಹೆಚ್ಚಾಗಿ, ವಿಶೇಷವಾಗಿ. ನೆರವಿ=ಗುಂಪು, ಕ್ರೀಡಿಸುವವನು=ಆಟವಾಡುವವನು.

352. ವಿಪ್ರಸಂತರ್ಪಣ=ಬ್ರಾಹ್ಮಣಭೋಜನ ಪರಸುತ=ಆಶೀರ್ವಾದಮಾಡುತ್ತ.

353. ಕೆಳೆಯರು=ಜತೆಗಾರರು. ಉಲ್ಲಾಸ=ಸಂತೋಷ, ಹರ್ಷ. ಭೂಸುರ=ಭೂ+ಸುರ, ಬ್ರಾಹ್ಮಣ; ಹೇಗೆ ? ಅನುರಾಗ=ಪ್ರೀತಿ. ತರುಣ=ಹುಡುಗ.

353b. ಎನಿತಿಲ್ಲ=ಎಷ್ಟಿಲ್ಲ; ಇದು ನಪುಂಸಕಲಿಂಗ; ಅನಾದರಣೆಯನ್ನು ಸೂಚಿಸುವುದಕ್ಕೆ ಹೀಗೆ ಪ್ರಯೋಗಿಸಿದೆ. ಎತ್ತಣವನು=ಎಲ್ಲಿಯವನು. ಹಾರ್ವರು=ಹಾರುವರು, ಬ್ರಾಹ್ಮಣರು.

354. ನಕ್ರಕುಲದೊಳು=ಮೊಸಳೆಗಳ ಗುಂಪಿನಿಂದ. ಪೆರ್ಮಡು=ಪಿರಿದು+ಮಡು, ದೊಡ್ಡಮಡು. ಗಭೀರ=ಆಳ ; ಇಲ್ಲಿರುವ ಉಪಮಾನದ ಔಚಿತ ವೇನು ? ಬೃಂದಾರಕ=ದೇವತೆ ; ಧರೆಯಬೃಂದಾರಕ ಎಂದರೇನು ?

355. ಏಕಾಧಿಪತ್ಯ=ಒಬ್ಬನೇ ರಾಜನಾಗಿರುವಿಕೆ. ಗಡ=ಅಲ್ಲವೆ. ಕುಮತಿ=ಕೆಟ್ಟ ಬುದ್ಧಿಯುಳ್ಳವನು

356. ಕಾನನ=ಕಾಡು. ಕುರುಪ=ಗುರುತನ್ನು. ಪಶುಘಾತಕಿಗಳು=ಜೀವವಧೆಮಾಡುವವರು, ಕಟುಕರು. ಹೀನದಯದಿಂದ=ನಿರ್ದಯವಾಗಿ. ಭಯಾನಕದಲಿ=ಭಯವಾಗುವ ಹಾಗೆ. ಕೊಲೆಗೆಳಸಿ=ಕೊಲೆಗೆ+ಎಳಸಿ, ಕೊಲೆಮಾಡಬೇಕೆಂದಪೇಕ್ಷಿ

ಸಿ. ಪ್ರಹ್ಲಾದ—ಹಿರಣ್ಯಕಶಿಪುವೆಂಬ ರಾಕ್ಷಸನ ಪುತ್ರನು ; ಇವನು ಹರಿಭಕ್ತನಾದುದರಿಂದ ಶಿವಭಕ್ತನಾದ ತಂದೆಯು ಇವನನ್ನು ಕೊಂದುಬಿಡುವಂತೆ ಕಟುಕರಿಗೆ ಆಜ್ಞೆಮಾಡಿದನೆಂದೂ, ಕಟುಕರ ಹಿಂಸೆಯನ್ನು ಸಹಿಸಲಾರದೆ ಮೊರೆಯಿಟ್ಟ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ವಿಷ್ಣುವು ನರಸಿಂಹಾಕಾರದಿಂದ ಸ್ತಂಭದಲ್ಲಿ ಅವತರಿಸಿ ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ರಕ್ಷಿಸಿದನೆಂದೂ ಪುರಾಣ ಕಥೆ.

357. ಪಾತಕಿಗಳು.=ಪಾಪಿಷ್ಟರು. ಅಜಮಿಳ=ಈ ಬ್ರಾಹ್ಮಣನು ಕನ್ಯಾಕುಬ್ಜವೆಂಬ ಪಟ್ಟಣದಲ್ಲಿ ಶೂದ್ರಸ್ತ್ರೀಗೆ ವಶಿಯಾಗಿ ಆಚಾರಭ್ರಷ್ಟನಾಗಿದ್ದು ಆಕೆಯ ಗರ್ಭದಲ್ಲಿ ಹತ್ತುಮಂದಿ ಮಕ್ಕಳನ್ನು ಪಡೆದು ಕೊನೆಯ ಮಗನಿಗೆ ನಾರಾಯಣನೆಂದು ಹೆಸರಿಟ್ಟಿದ್ದಂತೆಯೂ, ಈತನು ಪಾಪಿಷ್ಠನಾಗಿದ್ದರೂ ಅಂತ್ಯಕಾಲದಲ್ಲಿ ತನ್ನ ಮಗನಾದ ನಾರಾಯಣನ ಹೆಸರನ್ನು ಹೇಳಲು ಆ ನಾರಾಯಣ ಶಬ್ದೋಚ್ಚಾರಣ ಪುಣ್ಯದಿಂದ ಈತನಿಗೆ ಸದ್ಗತಿಯುಂಟಾದಂತೆಯೂ ಭಾಗವತದಲ್ಲಿ ಹೇಳಿದೆ. ಕಾಕಸಂಘಾತ = ಕಾಗೆಗಳ ಗುಂಪು. ಶೀತಳಮರೀಚಿ = ಚಂದ್ರ.

358. ಪಗಲು=ಹಗಲು. ಚಂಡಾಲರು=ಹೊಲೆಯರು. ಉಪಲ=ಕಲ್ಲು ಶಿಲೆ. ಬಗೆದೋರಲು = ವಿವೇಕವುಂಟಾಗಲು, ಖಗರಾಜಗಮನ=ಗರುಡನ ಮೇಲೆ ಸಂಚಾರಮಾಡುವ ವಿಷ್ಣು. ಜೀರು =ಮೊರೆಯಿಡು. ಪೆರ್ಗ=ಹಿರಿಗೆ, ಅತಿಶಯ.

359. ಅಯ್ದಲ್ಲದೊಂದು ಬೆರಳು=ಐದಲ್ಲದೆ+ಒಂದು ಬೆರಳು, ಆರು ಬೆರಳು ದಾತಾರ=ಮುಡ್ಡು ಕೊಟ್ಟವನು.

360. ಬಸಿವ=ಸುರಿವ. ಎಡವಡಿಯು=ಎಡದ+ಅಡಿಯು, ಎಡಗಾಲಿನ ವೇದನೆ=ನೋವು. ಬರಲ್ದು=ಇಲ್ಲ—ಬರಲಿಕೊಂಡು. ಬಸವ=ಸ್ರವಿಸುವ, ಬಾಷ್ಪ=ಕಣ್ಣೀರು

361. ಗರಿಗೆದರಿ=ಗರಿಯನ್ನು ಕೆದರಿಕೊಂಡು. ಎರಕೆ=ರೆಕ್ಕೆ. ಬಿಜಣಿವಿಕ್ಕಿತುಬೀಸಣಿಗೆಯು ಹಾಗೆ ಬೀಸಿತು ಅಂಚೆ=ದ್ಧ—

ಹಂಸ. ಉದಿರ್ಚಿತು=ಉದಿರಿಸಿತು. ತುಂತುರನು=ಸಣ್ಣ ಹನಿಗಳನ್ನು. ಸಾರಸ=ನೀರಹಕ್ಕಿ. ಬಿದಿರ್ಚಿ=ಬಿಚ್ಚಿ. ಕರುಬರು=ಹೊಟ್ಟೆಕಿಚ್ಚು ಪಡುವವರು.

362. ಕಾಮಿಸಿ=ಇಚ್ಛೆಸಿ. ನಲ್ಲನು=ಗಂಡನು, ಪ್ರಿಯನು, ವಲ್ಲಭ ಸ್ವಾಮಿ=ಪ್ರೀತಿಪಾತ್ರನಾದ ಯಜಮಾನನು. ಪೊರೆಗೆ=ಸಮೀಪಕ್ಕೆ. ಅಂಘ್ರಿಪಲ್ಲವ=ಚಿಗುರಿನಂತಿರುವ ಕಾಲು. ರುಧಿರ=ರಕ್ತ. ಕುಡುನಾಲಗೆ=ಕೊಂಕು+ನಾಲಗೆ, ಬಗ್ಗಿಸಿರುವ ನಾಲಗೆ.

363. ನಿಡುಸರ=ನಿಡಿದು+ಸರ, ದೀರ್ಘವಾದ ಸ್ವರ. ಪಾರಿವ=ಪಾರಿವಾಳ. ಕಲ್ಲುಣಿಸು=ಧ್ವನಿ. ಗೂಗೆ=ಗೂಬೆ. ಕಣ್ದೊಳಸು=ಕಣ್ಣ ಗುಡ್ಡೆಗಳನ್ನು ತಿರುಗಿಸುವಿಕೆ. ನಾಗ=ಹಾವು. ನಿರಾಹಾರ=ಊಟವಿಲ್ಲದಿರುವಿಕೆ. ಪರಿಭ್ರಮಣ=ಸುತ್ತುವಿಕೆ. ಆರೈವ=ನೋಡಿಕೊಳ್ಳುವ. ಗಹನಗಹ್ವರದೊಳು=ಕಾಡುಗವಿಯಲ್ಲಿ. ದುಃಖಾತಿರೇಕ=ದುಃಖದ ಆಧಿಕ್ಯ.

364. ದಿನಪ=ಸೂರ್ಯ. ಉಪಟಳ=ಹಿಂಸೆ. ಅಂಧಕಾರ=ಕತ್ತಲೆ. ಅನುಪಮದ=ಎಣೆಯಿಲ್ಲದ. ಕಾರೊಡಲ್=ಕರಿದು+ಒಡಲ್. ಬೇಡಪಡೆ=ಬೇಡರ ಪಡೆ, ಬೇಡರ ಗುಂಪು. ಬೇಂಟೆ=ಬೇಟೆ. ವಿಪಿನ=ಕಾಡು. ನಿನದ=ಶಬ್ದ.

365. ತಪ್ಪತಪ್ಪಲೊಳು=ಒಂದೊಂದು ತಪ್ಪಲಿನಲ್ಲಿಯೂ ಕಪ್ಪಕಪ್ಪನೆಯ=ಕಪ್ಪಾಗಿರುವ. ಪಬ್ಬುಗೆ=ಹಬ್ಬಿಕೆ. ಹಾಸು=ಪಗ್ಗ; ತ್ಸ—ಪಾಶ. ಶಬರಸೇನೆ=ಬೇಡರ ಪಡೆ. ಸೋವುತ್ತ=ಅಟ್ಟುತ್ತ. ಎಚ್ಚು=ಹೊಡೆದು: ಧಾ=ಇಸು.

366. ಪಂದಿ=ಹಂದಿ. ದಂತಿ=ದಂತವುಳ್ಳುದು, ಆನೆ. ಸಿಂಗ=ಸಿಂಹ. ವನಮಹಿಷ=ಕಾಡುಕೋಣ. ಉದ್ದಿಕೊಂಡ=ತಿಕ್ಕಿಕೊಂಡ. ಮರದಿಗುಡು=ಮರದ ತೊಕ್ಕೆ. ಪಾವಿತ್ತಲಿದೆ=ಪಾವು+ಇತ್ತಲ್+ಇದೆ. ಪಕ್ಕೆ=ಇಲ್ಲಿ—ಸ್ಥಾನ. ಮರಿ=ಒಂದು ಜಾತಿಯ ಹುಲ್ಲೆ. ಇಕ್ಕೆ=ಇರುವ ಸ್ಥಳ. ಪುಳಿಂದ=ಬೇಡ.

367. ನಿಡುಸರಳ್ = ನಿಡಿದು + ಸರಳ್. ಪೊಡೆ = ಹೊಡೆ. ಸಾರ್ಚು = ಸೇರಿಸು. ತುಡುಕು = ಕೈಚಾಚಿ ಬೇಗ ಹಿಡಿದುಕೊ. ಮೊಗಸು = ಆರಂಭಿಸು. ಅಡಗು = ಅಡಿಗಿಕೊ. ಅಡರು = ಹತ್ತು. ಪಡಿತಳಿಸು = ಹಿಡಿದುಕೊ.

368. ಉರದ = ಎದೆಯು. ಏರೆದೆಗೆದ = ಏರುವ ಹಾಗೆ ತೆಗೆದ, ಎಂದರೆ ಮುಂಭಾಗ ದಪ್ಪನಾಗಿರುವ. ಹಬ್ಬುಗೆಯ = ಹೆಚ್ಚಾದ, ವಿಸ್ತಾರವಾದ. ಪಚ್ಚಳ = ಪೃಷ್ಠಭಾಗ. ಜಂಘೆ = ಮೊಳಕಾಲು. ಕೊಂಕುಗುರ್ = ಕೊಂಕಾದ ಉಗುರ್, ಬಗ್ಗಿಕೊಂಡಿರುವ ಉಗುರು. ಮಡಿಗಿವಿ = ಮಡಿದುಕೊಂಡಿರುವ ಕಿವಿ. ಕಿಡಿಗಂಗಳ್ = ಕಿಡಿಯಂತಿರುವ ಕಣ್ಣುಗಳು. ಹೆಬ್ಬಲ್ಲು = ಹಿರಿದು + ಪಲ್ಲು. ಬಿಡುವಾಯ್ = ಬಿಟ್ಟಿರುವ ಬಾಯಿ. ಕೆನ್ನಾಲಗೆ = ಕೆಚ್ಚನೆ + ನಾಲಗೆ, ಕೆಂಪಾಗಿರುವ ನಾಲಗೆ. ಗಬ್ಬಿನಾಯ್ = ಮರಸಿಕೊಂಡಿರುವ ಬೇಟೆಯನ್ನು ವಾಸನೆಯಿಂದ ಕಂಡುಹಿಡಿದು ಬೇಟೆಯಾಡುವ ನಾಯಿ. ಕೇಸರಿ = ಸಿಂಹ.

369. ಕುತ್ತುರ್ಗಳಂ = ಹೊದರುಗಳನ್ನು. ಪಾತಮಂ ಮಾಡಿದರ್ = ಬೀಳಿಸಿದರು. ಸಿಡಿಗುಂಡು = ಹಾರಿಸುವ ಗೋಲಿ. ಬಡಿಗೋಲ್ಗಳು = ದೂರಕ್ಕೆ ಎಸೆದು ಹೊಡೆವ ದೊಣ್ಣೆಗಳು. ಉರುಬೆ = ವೇಗ. ಇರುಬೆ = ಗುಂಪು. ನೇಣು = ಹಗ್ಗ. ಉರುಲ್ಗೊಲೆ = ಬಲೆಹಾಕಿ ಹಿಡಿದು ಕೊಲ್ಲುವಿಕೆ. ಕಿರಾತರು = ಬೇಡರು.

370. ಎರಳೆ = ಹುಲ್ಲೆ. ಚಾಪಲಹಯ = ಚಂಚಲವಾದ ಕುದುರೆ. ಬಳಿಸಂದನು = ಸಮೀಪಕ್ಕೆ ಸೇರಿದನು.

371. ಮೃಗಯಾಕಾಮನಾಗಿ = ಬೇಟೆಯಾಡುವ ಆಶೆಯುಳ್ಳವನಾಗಿ. ಕುರಂಗ = ಹುಲ್ಲೆ. ಬೆನ್ನನೈದಿದಂ = ಹಿಂದುಗೂಡಲೆ ಹೋದನು. ಜವ = ವೇಗ. ಮುಂಚಲು = ಮಿರಲು.

372. ಹರಿಣ = ಹುಲ್ಲೆ. ಹರಿ = ವಿಷ್ಣು, ಕುದುರೆ. ಹರಿತಂದ = ಬಂದ. ಲಹರಿ = ಪ್ರವಾಹ. ಕಡವರ = ನಿಧಿ. ಎಡಹಿ = ಎಡವಿ

373. ವಾಜಿ = ಕುದುರೆ ಸಗ್ಗಳಿಯು = ತೊಗಲಿನ ಚೀಲದ. ಗಳ ದೊಳು = ಕಂಠದಲ್ಲಿ. ಸೈಪಿಡು = ಸಂತೈಸು, ಸಮಾಧಾನಪ ಡಿಸು. ಎರಕೆಯು = ಅಪೇಕ್ಷೆಯು, ಮೋಹದ. ವಸು = ನಿಧಿ. ಅಗ್ಗದ = ಹೆಚ್ಚಾದ, ತ್ಸ.—ಅರ್ಘ.

374. ಒಡಹುಟ್ಟಿದರು = ಅಣ್ಣತಮ್ಮಂದಿರು.

375. ಮೃಗಯಾವ್ಯಸನ = ಬೇಟೆಯಲ್ಲಿ ಕಾಂಕ್ಷೆ. ಕೃಷ್ಣಮೃಗ = ಸಾರಂಗ. ಕೃಷ್ಣಮೃಗಭಾವದ = ಹುಲ್ಲೆಯ ಹಾಗೆ ನಿರ್ದು ಷ್ಟವಾದ ಮನೋಭಾವವುಳ್ಳ. ಪಚ್ಚೆಸಿ = ವಿಭಾಗಮಾಡಿ. ಮೃಗಜೀವಿಗಳು = ಮೃಗಗಳಿಂದ ಜೀವನಮಾಡಿಕೊಳ್ಳುವ ವರು. ಮೃಗಧರ = ಚಂದ್ರ ಅಥವಾ ಈಶ್ವರ.

376. ಚರರು = ದೂತರು. ಕಂಪನಂ—ಮಗನಸ್ನು. ಸಾನಂದದಿಂ = ಹರ್ಷದಿಂದ. ಪೊರೆಯೇರಿದಳ್ = ಹಿಗ್ಗಿಹೋದಳು. ಪುಣ್ಯ ದ್ರುಮಂ = ಪುಣ್ಯವೆಂಬವೃಕ್ಷ.

377. ವಿದಿತ = ಪ್ರಖ್ಯಾತವಾದ. ಉತ್ತರೋತ್ತರವನು = ಮುಂದಾಗಬ ಹುದಾದ ಸಂಗತಿಗಳನ್ನು. ಶಶಾಂಕ = ಚಂದ್ರ ; ಶಶ = ಮೊಲವೇ, ಅಂಕ = ಗುರುತಾಗಿ ಉಳ್ಳವನು. ಕಳಕಳಸಿ = ಗಹಗಹಿಸಿ, ಹಾಸ್ಯಮಾಡಿ. ನಗುವನು = ಹಾಸ್ಯ ಮಾಡು ವನು. ಉಚ್ಚರಿಸಿ = ಹೇಳಿ. ನಾಮಕರಣಮಂಗೈದರು = ಹೆಸರಿಟ್ಟರು.

378. ಮಣಿದೀಪ = ರತ್ನದೀಪ. ಬಿತ್ತರದ = ವಿಸ್ತಾರವಾದ. ಸಂತಾ ನ = ಮಕ್ಕಳು. ಉತ್ತರೋತ್ತರಮಪ್ಪುದು = ಅಭಿವೃದ್ಧಿಗೆ ಬರುವುದು. ಸುರಪುರ........ಭಕ್ತರು = ಜೈಮಿನಿಯನ್ನು ಬರೆದ ಲಕ್ಷ್ಮೀಶಕವಿಯು ಒಂದೊಂದು ಸಂಧಿಯ ಕೊನೆ ಯಲ್ಲಿಯೂ ತನ್ನ ಇಷ್ಟದೇವತೆಯಾದ ಸುರಪುರದ ಎಂದರೆ ದೇವಪುರದ ಲಕ್ಷ್ಮೀರಮಣಸ್ವಾಮಿಯನ್ನು ಸ್ಮರಿಸುತ್ತಾನೆ.

29. ವೃಷಕೇತು ಬಭ್ರುವಾಹನರ ಕಾಳಗ.

379. ಗಜಪುರ = ಹಸ್ತಿನಾಪುರ. ಹಾಳಾದ = ಕೆಟ್ಟುಹೋದ. ಎಚ್ಚರಿಸು = ಇಲ್ಲಿ—ಅರಿಕೆಮಾಡು. ವೃಷಧ್ವಜ = ವೃಷಕೇತು, ಕರ್ಣನ ಮಗ.

380. ಬಳ್ಳಿತು = ಬಳ್ಳಯುದು. ತಾತ = ತಂದೆ ; ಚಿಕ್ಕಪ್ಪನಾದುದರಿಂದ ಅರ್ಜುನನನ್ನು ತಂದೆಯೆಂದು ಕರೆಯುತ್ತಾನೆ. ಜೀವಗಳ್ಳ = ಜೀವವನ್ನು ಉಳಿಸಿಕೊಳ್ಳುವುದಕ್ಕಾಗಿ ಯುದ್ಧಮಾಡದೆ ತಲೆ ತಪ್ಪಿಸಿಕೊಂಡು ಹೋಗುವವನು. ಮತ್ಪಿತಾಮಹಂ = ನನ್ನ ತಂದೆಯ ತಂದೆಯಾದ ಸೂರ್ಯನು. ಹೊಳ್ಳದೆಯ = ಸಾರವಿಲ್ಲದ ಎದೆಯ, ಅಂದರೆ ಧೈರ್ಯವಿಲ್ಲದ. ಹೊರಬಿಗರೊಳು = ಹೊರಗಣವರಲ್ಲಿ ಎಂದರೆ ಅನ್ಯರಲ್ಲಿ. ಕಳಂಕ = ಭೀತಿ. ಆಹವ = ಯುದ್ಧ ಬಿಂಕಮಂ = ಗರ್ವವನ್ನು.

381. ಮಂದಿ—ಇಲ್ಲಿ—ಕಾಲಾಳು. ಧನಂಜಯ = ಅರ್ಜುನ. ಪೊಂದೇರ್ಗೆ = ಚಿನ್ನ ತೇರಿಗೆ. ಚಾಪ = ಬಿಲ್ಲು. ನರನಂದನ = ಅರ್ಜುನನ ಮಗನಾದ ಬಭ್ರುವಾಹನ. ಅಹಡೆ = ಆದರೆ. ಕರ್ಣಜ = ಕರ್ಣನ ಮಗನಾದ ವೃಷಕೇತು.

382. ವಾಸಿ = ಖ್ಯಾತಿ. ಫಲ್ಗುಣ = ಅರ್ಜುನ. ಕಣೆ = ಬಾಣ. ನೇಸರಣುಗನ = ಕರ್ಣನ ; ಹೇಗೆ ? ಬರಿಕೈದು = ಶೂನ್ಯವಾಗಿ ಮಾಡಿ ಬರಿದುಮಾಡಿ. ಪಾರಿ = ಬಭ್ರುವಾಹನ.

383. ಎಚ್ಚಂಬು = ಚ್ಚ + ಅಂಬು, ಪ್ರಯೋಗಿಸಿದ ಬಾಣ. ವರೂಥ = ತೇರ

384. ಶರಸಂಧಾನ = ಬಾಣಗಳನ್ನು ಧನುಸ್ಸಿನಲ್ಲಿ ಹೂಡುವುದು. ಸತ್ವ = ಶಕ್ತಿ. ಸಾಹಸ = ಅಪಾಯವನ್ನು ಲಕ್ಷ್ಯಮಾಡದೆ ನುಗ್ಗಿ ಕೆಲಸಮಾಡುವ ಕೆಚ್ಚು. ಲಕ್ಷ್ಯ = ಗುರಿ. ಲಳಿ = ಚಳಕ. ಲಾಘವ = ವೇಗ. ಮುಂದುವರಿವ = ಮುಂದಕ್ಕೆ ನುಗ್ಗುವ. ಮೋಡಿ = ಚಲ. ಭಾರಣೆ = ಗೌರವ.

385. ಬಾಡಬ, ವೈಷ್ಣವ ಎಂಬ ಅಸ್ತ್ರಗಳು. ಉಚ್ಚಳಿಸಿ = ಮೇಲಕ್ಕೆ ಹಾರಿ. ತಚ್ಛೋಣಿತ = ಆರಕ್ತ ; ಯಾವ ಸಂಧಿ ? ಭೋಗವತಿ = ನಾಗಲೋಕ, ಪಾತಾಳ.

386. ಹೊಡಕರಿಸಿ = ಉಬ್ಬಿ. ರೋಷಾಗ್ನಿ = ಕೋಪವೆಂಬ ಬೆಂಕಿ, ಬಿಲ್ಲಾಳು = ಬಿಲ್ಲು ಹಿಡಿದು ಯುದ್ಧಮಾಡುವವರಲ್ಲಿ ಬಹಳ ಶೂರ. ಪೊಣರ್ದ = ಯುದ್ಧಮಾಡಿದ. ಚಿಗಿದು = ಹಾರಿ.

387. ಮುಹೂರ್ತತ್ರಿತಯ = ಮೂರು ಮುಹೂರ್ತಕಾಲ. ಬಾನೆಡೆ = ಬಾನ್ + ಎಡೆ, ಆಕಾಶಸ್ಥಳ. ಸರಿತ್ = ನದಿ.

388. ಇಳೆಗೆ = ಭೂಮಿಗೆ. ಪೊಡೆಚೆಂಡು = ಪುಟಚೆಂಡು. ಪಚಾರಿಸು = ಧಿಕ್ಕರಿಸು. ಚಿತ್ರಾಂಗದೆ = ಬಭ್ರುವಾಹನ ತಾಯಿ, ಅರ್ಜುನನ ಹೆಂಡತಿ. ನಾಕ = ಸ್ವರ್ಗ.

389. ಸಂಪಾತಿ............... ಬೀಳುವಂತೆ—ಹಿಂದೆ ಜಟಾಯು ಸಂಪಾತಿಗಳೆಂಬ ಎರಡು ಗೃಧ್ರಗಳು ಹಟದಿಂದ ಸೂರ್ಯಬಿಂಬದವರೆಗೂ ಹಾರಿದಂತೆಯೂ, ಆ ಕಾಲದಲ್ಲಿ ಸಂಪಾತಿಯು ಸೂರ್ಯನ ತಾಪದಿಂದ ಗರಿ ಸೀದು ಭೂಮಿಗೆ ಬಿದ್ದಂತೆಯೂ ಪುರಾಣಕಥೆ, ತ್ರಿಭುವನ = ಮೂರುಲೋಕ ಸುಭಟ = ಒಳ್ಳೆಯ ವೀರ. ದಿವಸ ವಲ್ಲಭ = ಸೂರ್ಯ.

390. ಮಸ್ತಕ = ತಲೆ. ಸಾಯಕ = ಬಾಣ. ಬೀಭತ್ಸು = ಅರ್ಜುನ ಒಬ್ಬೆರಳು = ಒಂದು + ಬೆರಳು.

391. ಧುರಕೆ = ಯುದ್ಧಕ್ಕೆ. ಗಾಲಿ............ ವ್ರೊಲು — ಹಿಂದೆ ಭಾರತ ಯುದ್ಧದಲ್ಲಿ ಕರ್ಣನ ತೇರು ಭೂಮಿಯಲ್ಲಿ ಹೂತುಕೊಳ್ಳಲು ತನ್ನ ತೇರನ್ನು ಎತ್ತುವವರೆಗೂ ಯುದ್ಧಮಾಡಕೂಡದೆಂದು ಕರ್ಣನು ಅರ್ಜುನನನ್ನು ಪ್ರಾರ್ಥಿಸಿಕೊಂಡನು.

392. ಅರುಣಾಂಬು = ರಕ್ತ; ಕೋಡಿವರಿ = ಕೋಡಿಯಾಗಿ ಹರಿ ಪೆಣಗುವರ್ = ಹೆಣಗುವರು.

393. ಐದೆ = ವಿಶೇಷವಾಗಿ ಚಾಪವಿದ್ಯಾಪ್ರವೀಣರ್ = ಬಿಲ್ಲವಿದ್ಯೆಯಲ್ಲಿ ಜಾಣರು. ಕವಲಂಬು = ಕವಲೊಡೆದಿರುವ ಬಾಣ. ಕಂಧರ = ಕತ್ತು.

30. ಹರಿಶ್ಚಂದ್ರನು ರಾಜ್ಯವನ್ನು ಒಪ್ಪಿಸುವುದು.

ಸೂಚನೆ :—ಕೌಶಿಕ = ವಿಶ್ವಾಮಿತ್ರ. ರಥಕಾರ = ತೇರನ್ನು ನಡೆಯಿಸುವವನು. ಜೀವರು = ಜೀವಿಗಳು, ಮನುಷ್ಯರು.

395. ಉಡುಗಣ = ನಕ್ಷತ್ರಸಮೂಹ. ನಡುವಣ = ಮಧ್ಯದಲ್ಲಿರುವ. ಎಡೆಗೊಂಬ = ಆಕ್ರಮಿಸಿಕೊಳ್ಳುವ. ಮುಗಿಲ್ಪಡೆ = ಮೇಘದ ಪಡೆ. ಮುಸುಗು = ಮುಚ್ಚಿಕೊಳ್ಳು.

396. ಅಳ್ಳಿರಿವ = ಶಬ್ದಮಾಡುವ. ಗುಡಿ = ಧ್ವಜಪಟ, ಬಾವುಟ. ಸರ ಬಿಗಿದು = ಸರವಾಗಿ ಕಟ್ಟಿ.

397. ಝಲ್ಲರಿ = ಜಾಲರಿ. ತಳತ್ತವತ್ತಾಗಿ ಸೇರಿಕೊಂಡ. ಇಡುಕುರ = ಸಂದಿಯುಳ್ಳಿರುವ. ಝಾಡಿಸುವ = ಬೀಸುವ. ಸೀಗುರಿ = ಒಂದು ವಿಧವಾದ ಕುಂಚ. ಅವಧಾರು ಜೀಯ—ಇವು ಮಹಾರಾಜರಿಗೆ ಹೇಳುವ ಗೌರವ ಸೂಚಕವಾದ ಉಪಚಾರೋಕ್ತಿಗಳು.

398. ನಸುಗುನಿ = ಮುಟ್ಟಿದರೆ ಉರಿವ ನಸುಗುನ್ನಿ ಎಂಬ ಗಿಡ. ನಿಟ್ಟಿಸದೆ = ನೋಡದೆ. ಸವಿದ = ತಿಂದ. ಕರ್ದುಕಿ = ಕಚ್ಚಿ. ಚಂಚು = ಕೊಕ್ಕು. ಬಸವಳಿಯುತೆ = ಪರವಶವಾಗಿ. ವ್ಯಾಮಸಕದಿಂ = ಅತ್ಯಾಸಕ್ತಿಯಿಂದ. ಪೊಲಗೆಟ್ಟ = ಸ್ಥಳಪಲ್ಲಟವಾದ, ಅಗಲಿದ.

399. ಬಿರು = ತೀಕ್ಷ್ಣವಾದ. ವೈಶಾಖ = ಬೇಸಗೆ. ಅರುವೆಗಪ್ಪಟ = ಹರುಕುಬಟ್ಟೆ. ಹೊಡೆವಟ್ಟು = ಪೊಡಮಟ್ಟು, ನಮಸ್ಕರಿಸಿ.

400. ಬೆಸಕೆಯ್ವುದು = ಆಜ್ಞಾನುಸಾರ ನಡೆವುದು

401. ಗೊಂದಣಿಮಿಗೆ = ಗುಂಪು ಹೆಚ್ಚಾಗಿ, ಅಥವಾ ಅತ್ಯುತ್ಸಾಹದೊಡನೆ. ಸೇಸೆಯನ್ನಿಕ್ಕಲು = ತಲೆಯಲ್ಲಿ ಮಂಗಳಾಕ್ಷತೆಯನ್ನು ಹಾಕಲು ಆರ್ತದಿಂ = ಆಸಕ್ತಿಯಿಂದ. ಸಾರಲೆಂದು = ಡಂಗೂರ ಹಾಕಿಸಬೇಕೆಂದು. ಜನದ ಅಳವರಿಯಲೆಂದು = ಎಷ್ಟು ಜನವಿದ್ದಾರೆಂದು ತಿಳಿಯಬೇಕೆಂಬ ಆಶೆಯಿಂದ. ಉರಿಹೊಯ್ದು = ಬೆಂಕಿ ಸೋಂಕಿದ. ಹೂಗಣಿ = ಪುಷ್ಪವಾಟಿಕೆ.

402. ಕಲಿ = ಶೂರನೇ. ಕಾಮಿನೀಜನಂ = ಹೆಂಗಸರು. ಎನ್ನಮಕ್ಕಳ ಮದುವೆಯಹುದು = ವಿಶ್ವಾಮಿತ್ರನು ಹರಿಶ್ಚಂದ್ರನ ಸತ್ಯವ್ರತವನ್ನು ಭಂಗಮಾಡುವುದಾಗಿ ವಸಿಷ್ಠನೊಡನೆ ಪ್ರತಿಜ್ಞೆಮಾಡಿ ಅದಕ್ಕಾಗಿ ಮಾಯೆಯಿಂದ ಕೆಲವು ಚಂಡಾಲಸ್ತ್ರೀಯರನ್ನು ಸೃಷ್ಟಿಸಿ ಅವರನ್ನು ಮದುವೆಯಾಗೆಂದು ಹರಿಶ್ಚಂದ್ರನನ್ನು ಪೀಡಿಸಿದನು. ಆ ಚಂಡಾಲಸ್ತ್ರೀಯರನ್ನೇ ತನ್ನ ಮಕ್ಕಳೆಂದು ಹೇಳುತ್ತಾನೆ.

403. ತೊತ್ತು = ಆಳನ್ನು. ದಾಸಿಯನ್ನು. ಇತ್ತು = ಕೊಡು ಕೊಟ್ಟು. ಮಾಣಿಕದೊಡವು = ರತ್ನಾಭರಣ. ಕುರಿಗಸರುಳಂ = ಕುರಿಯ ಹಿಕ್ಕೆಯನ್ನು. ಓವದೆ = ರಕ್ಷಿಸದೆ, ಇಪ್ಪತ್ತೊಂದುತಲೆವೆರಸಿ = ತನ್ನ ಹಿಂದೆ ಏಳುತಲೆ, ತನ್ನೊಡನೆ ಏಳುತಲೆ, ತನ್ನ ಮುಂದೆ ಏಳುತಲೆ, ಒಟ್ಟು ಇಪ್ಪತ್ತೊಂದು ತಲೆ.

404. ಅಂಕ = ಲೆಕ್ಕಗಳು. ಟಂಕ = ಧನ. ಕುಳಕರ್ಣಿ = ಲೆಕ್ಕಬರೆವವನು, ಗುಮಾಸ್ತೆ. ದುರ್ಗ = ಅಪಾಯಬಂದಾಗ ಅವಿತುಕೊಳ್ಳುವ ಸ್ಥಳಗಳು. ಮುದ್ರೆ = ರಾಜನ ಮುದ್ರೆಯ ಉಂಗುರ. ಬೇರೊಪ್ಪುಗೊಟ್ಟು = ಬೇರೆ ಬೇರೆ ಒಪ್ಪಿಸಿ ಕೊಟ್ಟು.

405. ಹಡಪಾಳರು = ಹಡಪವಳರು ಎಂದರೆ ತಾಂಬೂಲದ ಸಂಚಿಯನ್ನು ಹೊತ್ತಿರುವವರು. ಭಂಡಾರಿಗಳನು = ಭಂಡಾರದ ಅಧಿಕಾರಿಗಳನ್ನು. ಏವೊಗಳ್ವೆನು = ಏನೆಂದು ವರ್ಣಿಸಲಿ, ವರ್ಣಿಸುವುದಕ್ಕೆ ಅಸಾಧ್ಯವೆಂದು ತಾತ್ಪರ್ಯ.

406. ಬರೆತ = ಬಣಗಿಹೋದ, ನಿರ್ದ್ರವವಾದ. ದುಗುಡದುಳ್ಕುಡುವಂಗಂ = ದುಃಖದಿಂದ ತುಂಬಿ ತುಳುಕುತ್ತಿರುವ ಶರೀರ. ನಿರೋಧಾಗ್ನಿ = ತಡೆಯಿಂದ ಉಂಟಾದ ಸಂತಾಪ.

407. ಸಿರಿಮುಡಿಯ = ಶ್ರೇಷ್ಠವಾದ ವಸ್ತ್ರಗಳ. ಮರ್ದನದ = ಕೈಕಾಲುಗಳನು ಅಮುಕುವ. ಹಂತಿಗಳ = ಪಂಕ್ತಿಯಲ್ಲಿ

ಕುಳಿತು ಊಟಮಾಡುವ. ಪಡಿಸಣದ = ಊಟಮಾಡಿ ಬಿಟ್ಟ ಎಲೆಯಲ್ಲಿ ಶೇಷವಾದುದನ್ನು ತಿನ್ನುವ. ಯಕ್ಷಕರ್ದಮದ = ಪರಿಮಳ ದ್ರವ್ಯಗಳನ್ನು ಮಾಡುವ. ಬಹುನಿಯೋಗಕಾರಿಯರ್ = ಹಲವು ಬಗೆಯ ಊಳಿಗದವರು. ಈ ಪದ್ಯದಲ್ಲಿರುವ ಷಷ್ಠ್ಯಂತದ ಪದಗಳು 'ನಿಯೋಗಕಾರಿಯರ್' ಎಂಬ ಪದದಲ್ಲಿ ಅನ್ವಯಿಸುತ್ತವೆ.

408. ನಾಣ್ಯದ ವರ್ಗ = ನಾಣ್ಯಗಳ ರಾಶಿ. ಶಸ್ತ್ರಸದನ = ಆಯುಧಶಾಲೆ. ಹಸ್ತಿಸಂದೋಹ = ಆನೆಯ ಗುಂಪು. ಪದಾತಿವ್ರಾತ = ಕಾಲಾಳಿನ ಸಮೂಹ. ಕಂದರ್ಪ = ಮನ್ಮಥ.

409. ಸಿವುಡಿ = ತಲೆಗೆ ಸುತ್ತಿಕೊಳ್ಳುವ ರುಮಾಲು.

410. ಬಸುರಂ = ಹೊಟ್ಟೆಯನ್ನು. ಕಟ್ಟೊರಲಿ = ಹೆಚ್ಚಾಗಿ ಕೂಗಿಕೊಂಡು. ಮಿಡುಕಿತು = ನಡುಗಿತು.

411. ಹಾಸಿಗೆಯೊಳು = ಹಾಸಿಗೆಯಲ್ಲಿ. ಪವಡಿಸುವಾತ = ನಿದ್ರೆಮಾಡುವವನು. ಏಕಾಕಿಯಾಗಿ = ಒಬ್ಬೊಂಟಿಗನಾಗಿ.

412. ಮುಗುದರಸು = ಮುಗ್ಧನಾದ ಅರಸು, ಏನೂ ಅರಿಯದ ಅರಸು.

413. ಜಡೆಗಳೆದು = ಜಡೆಯನ್ನು ತೆಗೆದುಹಾಕಿ. ಮಕುಟ = ಕಿರೀಟ ಕಂಪಮೂಲ = ಗೆಡ್ಡೆಗೆಣಸು. ಅಸಿ = ಕತ್ತಿ.

414. ಮಲೆತು = ಪ್ರತಿಭಟಿಸಿ, ಔದ್ಧತ್ಯದಿಂದ ಕೊಬ್ಬಿ. ಅರಿಷಡ್ವರ್ಗ = ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಅಂತಶ್ಶತ್ರುಗಳು. ಕರಣವ = ಇಂದ್ರಿಯಗಳನ್ನು. ಸಂತಲಿಡಲರಿಯದವ = ಸಮಾಧಾನಸ್ಥಿತಿಯಲ್ಲಿಟ್ಟುಕೊಳ್ಳಲಾರದವನು. ತಪಸ್ತೇಜದಿಂ = ತಪೋಮಹಿಮೆಯಿಂದ. ಪುರುಷಾರ್ಥಕೋಶವಮಂ = ಪರಮಪುರುಷಾರ್ಥಕ್ಕೆ ಭಂಡಾರದಂತಿರುವ ಮೋಕ್ಷವನ್ನು. ಕಣ್ಕಟ್ಟಿದೆ = ಕಣ್ಣು ಕುರುಡಾಯಿತೇ, ತಿಳಿಯದೆ ಹೋಯಿತೆ ?

415. ಅಜ್ಞಾತವಾಸ = ಇದ್ದ ಸ್ಥಳ ಒಬ್ಬರಿಗೂ ಗೊತ್ತಿಲ್ಲದಂತೆ ವಾಸ ಮಾಡುವಿಕೆ. ಎರೆವರ = ಯಾಚಕರ.

416. ಅಸವಸ = ಆತುರ. ಒಗೆಯೆ = ಸುರಿಸಲು.

417. ಮಾರುತ್ತರ = ಪ್ರತ್ಯುತ್ತರ. ಅಧಮರು = ನೀಚರು.

419. ಅನ್ವಯಾಗತವಾಗಿ = ವಂಶಪಾರಂಪರ್ಯವಾಗಿ ಬಂದ. ಅಪ್ಪೈಸಿ = ಒಪ್ಪಿಸಿ.

## 40. ವಸಂತಋತು ವರ್ಣನೆ.

420. ಒಡ್ಡು = ಗುಂಪು ಜಾರೆ = ಹೊರಟು ಹೋಗಲು. ಕಂಪು = ಪರಿಮಳ. ತಾರೆ = ಬತ್ತಲು. ಪೇರೆ = ಹೇರಿಕೊಳ್ಳಲು. ವಸಂತಾಗಮ = ವಸಂತಋತುವಿನ ಪ್ರಾದುರ್ಭಾವ. ಮನೋರಾಗ = ಸಂತೋಷ.

421. ಮೌನವ್ರತಾಚಾರಿಯಾದ = ಮೌನವ್ರತವನ್ನು ನಡೆಯಿಸುತ್ತಿದ್ದ, ಎಂದರೆ ಧ್ವನಿಮಾಡದೆ ಇದ್ದ. ಮಲ್ಲಿಕಾಮಾನಿನಿ = ಮಲ್ಲಿಗೆಯೆಂಬ ಹೆಂಗಸು. ಚಂಡಾಲಿ = ಚಂಡ + ಅಳಿ, ಕೊಬ್ಬಿದ ತುಂಬಿ ; ಅರ್ಥಾಂತರ—ಚಂಡಾಲಸ್ತ್ರೀ, ಹೊಲತಿ. ನಳಿನಿ = ಕಮಲವೆಂಬ ಹೆಂಗಸು. ಬಂಡಿಗೆ = ಮಕರಂದಕ್ಕೆ ; ಅರ್ಥಾಂತರ —ದುರ್ವ್ಯಾಪಾರಕ್ಕೆ. ಮಧು = ವಸಂತಋತು ; ಅರ್ಥಾಂತರ - ಮದ್ಯ. ಈ ಪದ್ಯದಲ್ಲಿ ಮಧುಪಾನದಿಂದ ಮುನಿಗಳೂ ಕೂಡ ವ್ರತವನ್ನು ಬಿಡುತ್ತಾರೆ. ಉತ್ತಮಸ್ತ್ರೀಯರೂ ಕೂಡ ನೀಚರಲ್ಲಿ ಸ್ನೇಹ ಬೆಳಯಿಸುತ್ತಾರೆ ; ರಾಜಸ್ತ್ರೀಯರೂ ಕೂಡ ದುರ್ವ್ಯಾಪಾರದಲ್ಲಿ ಪ್ರವರ್ತಿಸುತ್ತಾರೆ ; ಜಾತಿಧರ್ಮವೂ ಕೆಟ್ಟುಹೋಗುತ್ತದೆ ಎಂಬ ಅರ್ಥವು ಸೂಚಿತವಾಗಿದೆ.

422. ಪದಂಪು = ಪದವು, ಸೌಖ್ಯ. ಬಿಣ್ಪು = ಭಾರ. ಕದಂಪು = ಕೆನ್ನೆ. ಚೈತ್ರಾಗಮ = ವಸಂತಾಗಮ.

423. ನಿಸ್ಸುನಿಗುಸುರಿ = ಚಿನ್ನದ ಕುಸುರಿ, ಚಿನ್ನದಿಂದ ಮಾಡಿದ ಸಣ್ಣಸಣ್ಣ ಗೆಜ್ಜೆ. ನಿಡಿ = ಹಸುರುಗಾಯಿ ಪಚ್ಚೆವರಲ =

ಪಚ್ಛೆ ಹರಳಿನ. ಸೂಸಕ = ಗೊಂಚಲು. ಗುದಿ = ಗೊಂಚಲು. ಸ್ಮರನ = ಮನ್ಮಥನ. ಕೈಗೈದ = ಅಲಂಕರಿಸಿದ. ಗೂಡಾರ = ತ್ಸ.—ಗೂಢಾಗಾರ, ಡೇರೆ.

424. ತೇರ್ಗೈಸಿ = ಗುಂಪುಗೂಡಿ. ಅವೆರ = ಅವುಗಳ ; ಇದು ಹಳಗನ್ನಡದ ನಪುಂಸಕಲಿಂಗ. ಮೊಳಗು = ಗುಡುಗು. ಮಾರುತಹತಿಯೊಳು = ಗಾಳಿಯ ಪೆಟ್ಟಿನಿಂದ. ತೋರ = ದಪ್ಪನಾದ. ಬಂದುಗೆಯ = ಕೆಂಪು ದಾಸವಾಳಗಿಡದ. ರಯ್ಯಮಾದ = ಸೊಗಸಾದ. ಇಂದ್ರಗೋಪ = ಮಳೆಯಾದಮೇಲೆ ಕಾಣಿಸಿಕೊಳ್ಳುವ ಒಂದು ಬಗೆಯ ಕೆಂಪುಹುಳು.

## 32. ಬಿಜ್ಜಳನ ಸಭೆ.

424b. ಉದಯಾಚಲ = ಉದಯಪರ್ವತ. ರವಿ = ಸೂರ್ಯ. ಪದಪು = ಪ್ರೀತಿ. ಬಿಜ್ಜಳ—ಈ ರಾಜನು ಕಾಲಚೂರ್ಯವಂಶಕ್ಕೆ ಸೇರಿದವನು ; ಇವನು ಕಲ್ಯಾಣವೆಂಬ ಪಟ್ಟಣದಲ್ಲಿ ಆಳುತ್ತಿದ್ದನು ; ಈತನಿಗೆ ವೀರಶೈವ ಮತೋದ್ಧಾರಕನಾದ ಬಸವನು ಮಂತ್ರಿಯಾಗಿದ್ದನು.

425. ದಿಗ್ಭಿತ್ತಿ = ದಿಕ್ಕುಗಳೆಂಬ ಗೋಡೆಗಳು. ಅಮರಿ = ಹೊಂದಿಕೊಂಡು ; ಧಾ.—ಅಮರ್. ಖಚಿತ = ಕೆತ್ತಿದ. ಜೊನ್ನ = ಬೆಳದಿಂಗಳು ; ತ್ಸ—ಜ್ಯೋತ್ಸ್ನಾ. ಪುದಿದ = ವ್ಯಾಪಿಸಿದ. ಮಂಡಳಿಸಿ = ಚಕ್ರಾಕಾರವಾಗಿ ಸುತ್ತಿಕೊಂಡು. ಗದ್ದುಗೆ = ಪೀಠ. ಮಂಡಲಾಧೀಶರು = ಸಾಮಂತರಾಜರು.

426. ತೊಡರಿನ = ಬಿರುದಿನ. ಆಭರಣಗಳುಳ್ಳ. ಪೊಂಜರಪಣಿ = ಪೊನ್ + ಸರಪಣಿ. ಕರವಾಳ = ಕತ್ತಿ. ಮುಡುಹು = ಭುಜಶಿರಸ್ಸು. ಹೆಗಲು.

427. ದಿನವಹಿ = ಆಯಾ ದಿನದಲ್ಲಿ ನಡೆದ ಲೆಕ್ಕಗಳ ಕಡಿತ, ರೋಜುವಾರು ಲೆಕ್ಕ. ವರ್ಗ = ಒಬ್ಬೊಬ್ಬರ ಹೆಸರಿಗೆ ಬಂದೊಂದು ಹಾಳೆಯನ್ನು ಇಟ್ಟು ಅವರುಗಳ ಲೆಕ್ಕಾಚಾರವನ್ನು ಬರೆದಿ

ರುವ ಪುಸ್ತಕ. ಮಾಸಾಂತಿಕ = ತಿಂಗಳ ಕೊನೆಯಲ್ಲಿ ಬರೆದ ಬಟ್ಟು ಲೆಕ್ಕದ ಪಟ್ಟಿ. ಭೇದಕರ = ಲೆಕ್ಕಾಚಾರಗಳನ್ನು ಶೋಧಿಸಿ ನೋಡುವವರು, ತನಿಖೆ ಮಾಡುವವರು. ಪರಿಕಿಸು = ಪರೀಕ್ಷಿಸು. ಒಳಗುಗಾಣದಂತೆ = ಗುಟ್ಟನ್ನು ತಿಳಿಯದ ಹಾಗೆ. ನೈಜವಾಗೆ = ಸ್ವಭಾವವಾಗಲು. ಚೆಚ್ಚರ = ಜಾಗರೂಕತೆ. ಕರಿಣಿಕ = ಲೆಕ್ಕವನ್ನು ಬರೆವ ಗುಮಾಸ್ತೆ.

428. ಶ್ರುತಿ = ವೇದ. ಶಬ್ದ = ವ್ಯಾಕರಣ. ಯಜ್ಞಸೂತ್ರ = ಯಜ್ಞೋಪವೀತ, ಜನಿವಾರ. ಮುದ್ರಿಕೆ = ಉಂಗುರ.

429. ಶಾರೀರಸೂತ್ರ = ವೈದ್ಯಶಾಸ್ತ್ರ. ನಿಧಾನ = ಉತ್ಪತ್ತಿ ಕಾರಣ

430. ತಲೆದೂಗಿಸುವ = ಸಂತೋಷದಿಂದ ತಲೆ ತೂಗುವಂತೆ ಮಾಡುವ. ಸಮಸ್ಯೆ = ಅಸಮಂಜಸವಾಗಿ ಅರ್ಥತೋರುವಂತೆ ಸೇರಿಸಿಕೊಟ್ಟ ಪದ್ಯಭಾಗವನ್ನು ಇಟ್ಟುಕೊಂಡು ಸಮಂಜಸವಾಗುವಂತೆ ಶ್ಲೋಕವನ್ನು ಪೂರ್ತಿಮಾಡಿ ಹೇಳುವುದು ; ಉದಾ.—"ದನವಂ ಕೊಯ್ಕೊಯ್ದು ಬಸದಿಯೊಳ್ ತುಂಬಿಟ್ಟರ್" ಎಂಬುದು ಒಂದು ಸಮಸ್ಯೆ. ಇದರಲ್ಲಿ "ಅಹಿಂಸಾ ಪರಮೋಧರ್ಮಃ" ಎಂಬುದೇ ಮುಖ್ಯ ಧರ್ಮವಾಗಿ ಉಳ್ಳ ಜೈನರ ಬಸದಿಯಲ್ಲಿ ದನವನ್ನು ಎಂದರೆ ಜೀವಪಶುವನ್ನು ಕೊಯ್ದರೆಂಬುದು ಅಸಂಭವ ಈ ವಾಕ್ಯಕ್ಕೆ ಸಮಂಜಸವಾದ ಅರ್ಥವನ್ನು ಕಲ್ಪಿಸುವುದಕೆ ಕ್ಕೀಸ್ಕರ ಸಮಸ್ಯಾಪೂರ್ತಿ ಮಾಡುವ ಜಾಣನು ಮೊದಲು ಮೂರು ಪಾದಗಳನ್ನು ಬರೆದುಕೊಂಡು ಮೂರನೆಯ ಪಾದದ ಕೊನೆಯಲ್ಲಿ 'ಚಂ' ಎಂಬ ಅಕ್ಷರವನ್ನು ಸೇರಿಸಿದರೆ "ಚಂದನವಂ........ತುಂಬಿಟ್ಟರ್" ಎಂಬ ಸಮಂಜಸವಾದ ಅರ್ಥವುಳ್ಳ ವಾಕ್ಯವಾಗುತ್ತದೆ. ಕಂತೀ ಹಂಪನ ಸಮಸ್ಯೆಯನ್ನು ನೋಡಿ. ಘಟಿಕಾಶತ = ಕೊಟ್ಟ ವಿಷಯದ ಮೇಲೆ ಒಂದು ಗಳಿಗೆಗೆ ನೂರು ಪದ್ಯಗಳನ್ನು ಬರೆವುದು.

**431.** ದಾನರಾಧೇಯ = ದಾನಮಾಡುವುದರಲ್ಲಿ ಕರ್ಣನಂತಿರುವವನು ; ಕರ್ಣನು. 'ರಾಧೆ' ಎಂಬುವಳಿಂದ ಸಲಹಲ್ಪಟ್ಟುದರಿಂದ ಅವನಿಗೆ ರಾಧೇಯನೆಂಬ ಹೆಸರು ಬಂದಿತು. ಬ್ರಹ್ಮಾಯು = ಬ್ರಹ್ಮನು ಇರುವವರೆಗೂ ಆಯುಸ್ಸು. ದೀರ್ಘಾಯುಸ್ಸು. ಕೈವಾರ = ಸ್ತೋತ್ರ. ಕಿವಿಗಿಡಿ = ಕಿವಿಯಲ್ಲಿ ತುಂಬು.

432. ಭಗದತ್ತ—ಈ ರಾಜನು ಆನೆಯೇರಾಟದಲ್ಲಿ ಬಲು ಜಾಣನೆಂದು ಭಾರತ ಕಥೆ. ಸಾಟಿ=ಸಮಾನ. ಕಂಧರ=ಕತ್ತು ; ಕಂ=ತಲೆಯನ್ನು, ಧರ=ಧರಿಸಿರುವುದು. ಬಿರುದುಕಡೆಯ=ಬಿರುದಿನ ಬಳಿ. ಕಡೆಯ=ತ್ಸ.—ಕಟಕ. ರೇವಂತ—ಈತನು ಕುದುರೆಯೇರುವುದರಲ್ಲಿ ಬಹು ಜಾಣನು. ಪಾಸಟಿ=ಸಮಾನ.

## 33. ವನವರ್ಣನೆ.

433. ಭೂಜ=ವೃಕ್ಷ ; ಹೇಗೆ ? ಸಗಾಢ=ಸಮೃದ್ಧವಾದ.

434. ಗವಾಸ್ಪದ= ದನಗಳ ದೊಡ್ಡಿ, ತುರುಹಟ್ಟಿ.

435. ಮಂಜುಲ=ಗೊಂಚಲು. ಮಂಜುಳಧ್ವನಿ=ಮನೋಹರವಾದ ಧ್ವನಿ. ಪರಮ=ಭ್ರಮರ, ತುಂಬಿ.

436. ರಸಂಗಳಂ=ನೀರನ್ನು. ಒರೆಯುದ=ಸ್ರವಿಸದ, ಚಂದ್ರಕಾಂತಗಳನ್ನು. ಮೆರೆಯುವ=ತೋರಿಸದೆ ಇರುವ. ಧರಂಗಳಂ=ಪರ್ವತಗಳನ್ನು. ಸೊರ=ತ್ಸ.—ಸ್ವರ.

437. ಅವಚೋದ್ಯಂ=ಆಶ್ಚರ್ಯವೇನು. ಕರ್ಮಂಕಿದೊಡೆ=ಕುಟುಕಿದರೆ. ಇನಿದು=ಮಧುರವಾದ. ಕಾಲ್ಗಳು=ಕಾಲುವೆಗಳು. ಪಾಮರಿ=ಹೊಲಗಾವ ಹೆಂಗಸು.

438. ಸೋವ=ಅಟ್ಟುವ. ಏಳಿದಂಗೆಯ್ದು=ಅಲಕ್ಷ್ಯಮಾಡಿ, ಹಾಸ್ಯಮಾಡಿ. ಕೀರಾಳಿ=ಗಿಳಿಗಳ ಗುಂಪು. ಕಳವೆ=ತ್ಸ.—ಕಲಮಾಭತ್ತದ ಪೈರು. ಪಸುರ್ವಟ್ಟೆ=ಹಸುರು ಬಟ್ಟೆ.

439. ಕಿಕ್ಕಿರಿದ=ಒತ್ತೊತ್ತಾಗಿ ಬೆಳೆದ.

440. ಖಂಡಶರ್ಕರೆ=ಕಲ್ಲುಸಕ್ಕರೆ. ದಿಂಡುರುಳ್ಚು=ಮರವನ್ನು ಉರುಳಿಸುವಂತೆ ಉರುಳಿಸು. ಆಳ್ದಂಗೆ=ಆಳಿದವನಿಗೆ, ದಣಿಗೆ. ಕೋದಂಡ=ಬಿಲ್ಲು. ಉದ್ದಂಡತೆಯ=ಹೆಚ್ಚಾದ. ಸೋಗೆ ವಸುರ=ಸೋಗೆಯ ಹಸುರು ಬಣ್ಣವುಳ್ಳ.

441. ತಕ್ರ=ಮಜ್ಜಿಗೆ. ಸತ್ರಶಾಲೆಯಂ=ಸತ್ರದ ಮನೆ.

442. ಮುಕ್ತಿಕಾಂತೆಯರಮನೆಯಂತೆ=ಮುಕ್ತಿಯು ನೆಲೆಯೆಂಬ ಹಾಗೆ. ಶೈವನೇಮ=ಶಿವನಿಷ್ಠೆ, ಶಿವಸಂಬಂಧವಾದ ನಿಯಮ. ಕೋಶಗೃಹ=ಭಂಡಾರ, ಬೊಕ್ಕಸ. ತಿಂತಿಣೀ=ಗುಂಪು. ಸೌಧ=ಉಪ್ಪರಿಗೆ. ತಾಣ=ಸ್ಥಳ.

443. ಕೌಂಗು=ಅಡಕೆ. ಕೊಂಚೆ=ತಿತ್ತಿರಿಯೆಂಬ ಪಕ್ಷಿ. ಪೂವೆಂಡು=ಹೂವಿನಲ್ಲಿ ಇರುವ ಮಕರಂದ. ಕಾದಲರ್=ಅನುರಾಗವುಳ್ಳ ಸ್ತ್ರೀಪುರುಷರು.

444. ಚೂತ=ಮಾವಿನ ಮರ. ಪರ್ವಿದ=ಹಬ್ಬಿದ. ಪೂಗ=ಅಡಕೆ. ಕೊರ್ವಿದ=ಕೊಬ್ಬಿಬೆಳೆದ. ಕವಳಂ=ಬಾಳೆ. ಬೀಡೆವಣ್=ಬಿರಿತು ಇರುವ ಹಣ್ಣು. ಪನಸ=ಹಲಸು. ಕಿಸುವಣ್=ಕೆಂಪಾದ ಹಣ್ಣು. ತೋರ್ಪ=ತೋರುವ. ನಾರಂಗ=ಹೇರಿಳೆ ಹಣ್ಣು. ಜಂಬೀರ=ನಿಂಬೆ.

445. ಸುರಿ................ಕೊಂಡೆನೆ–ಇಂದ್ರನ ಖಾಂಡವ ವನವು ಅಗ್ನಿಯಿಂದ ದಹಿಸಲ್ಪಟ್ಟಿತೆಂದು ಭಾರತ ಕಥೆ. ದಶಶಿರನ...........ಪಡೆದೆನೆ—ರಾವಣನ ಅಶೋಕವನವು ಹನುಮಂತನಿಂದ ಹಾಳುಮಾಡಲ್ಪಟ್ಟಿತು ಎಂದು ರಾಮಾಯಣದ ಕಥೆ. ಧನದ........ಪಕ್ಕಾದೆನೆ—ಕುಬೇರನ ಚೈತ್ರರಥವೆಂಬ ಉದ್ಯಾನವನವು ರಾಕ್ಷಸರೆಂಬ ಒಂದು ಜಾತಿ ದೇವತೆಗಳ ಸಂಚಾರಕ್ಕೆ ಎಡೆಯಾಯಿತು; ಇಲ್ಲಿ—ರಾಕ್ಷಸರ ಕಾಲ್ದುಳಿತ ಎಂಬ ಶಬ್ದಗಳಿಂದ ನೀಚರ ಕಾಲ ಒದೆತಕ್ಕೆ ಈಡಾಯಿತು ಎಂಬ ಅರ್ಥವು ಸೂಚಿತವಾಗುತ್ತದೆ. ಪರಪುಟ್ಟ=ತ್ಸ.—ಪರಪುಷ್ಟ—ಕೋಗಿಲೆ.

446. ಪಾತ್ರ=ಮೇಳದವರು, ಕುಣಿವವರು. ಅಂಗಭವ=ಮನ್ಮಥ. ಸಲ್ಲಾಸ್ಯಭವನ=ಮೇಳಕಟ್ಟುವ ಮನೆ.

447. ಪೊಕ್ಕುಳಿ=ಕೊಳಕಲೆ. ಓವರಿ=ಕೋಣೆ.

448. ಮಲಗುಮಾಡ=ಮಲಗಿಕೊಳ್ಳುವುದಕ್ಕೆ ಅನುಕೂಲವಾದ ಉಪ್ಪರಿಗೆ, ಮಾಡುವೆಟ್ಟು=ಕೃತಕಾಚಲ, ತೋಟಗಳಲ್ಲಿ ವಿನೋದಾರ್ಥವಾಗಿ ಬೆಟ್ಟದಂತೆ ಮಾಡಿರುವ ದಿಣ್ಣೆಗಳು.

449. ಕುರುಜು=ಬಿದಿರು ಹಚ್ಚಿಗಳಿಂದ ಮಾಡಿದ ಮಂಟಪ. ಮೇರುವೆ=ಗೋಪುರದ ಹಾಗೆ ಕಟ್ಟುವ ಮಂಟಪಗಳು. ಪೂವಲಿಗೆದರುವ=ಹೂವುಗಳನ್ನು ಮಂಗಳಾರ್ಥವಾಗಿ ಸುರಿಯುತ್ತಿರುವ.

## 34. ವಿದ್ಯಾಭ್ಯಾಸ.

450. ಅಕ್ಕರ=ಅಕ್ಷರ. ಕೊಂದಂ=ಇಲ್ಲಿ—ಕೇಡು ಮಾಡಿದವನು.

452. ಮೋದದ=ಇಲ್ಲಿ—ಸವಿಯಾದ.

453. ವಾಚಿಪುದು=ಓದುವುದು.

454. ಅಳವಪ್ಪುದು=ಸಾಧ್ಯವಾಗುವುದು.

455. ಆಪಜ್ಜಲಧಿಗೆ=ಆಪತ್ತೆಂಬ ಸಮುದ್ರಕ್ಕೆ. ಯಾನಪಾತ್ರ=ತೆಪ್ಪ, ದೋಣಿ. ನಿಯೋಗ=ರಾಜಕಾರ್ಯ. ಗುರುಪದಂ=ಆಚಾರ್ಯಸ್ಥಾನ.

456. ಇದರಲ್ಲಿ ಧನಕ್ಕಿರುವ ದೋಷವನ್ನೂ ವಿದ್ಯಾಧನಕ್ಕಿರುವ ಗುಣವನ್ನೂ ನಿರೂಪಣೆ ಮಾಡಿದೆ. ತಸ್ಕರ=ಕಳ್ಳ.

457. ಬರ=ಕ್ಷಾಮ.

## 35. ವಿವಿಧ ನೀತಿಗಳು.

459. ದುಃಖತಿಮಿರ ಜ್ಯೋತಿಗಳ್=ದುಃಖವೆಂಬ ಕತ್ತಲೆಗೆ ಬೆಳಕಿನಂತಿರುವುವು; ದುಃಖವನ್ನು ಹೋಗಲಾಡಿಸುವುವು.

460. ಪರಹಿತವ=ಇತರರಿಗೆ ಹಿತವಾದ. ಮಾತಂ=ಮಾತನ್ನು.

461. ಪೊರೆವನೆ=ಕಾಪಾಡುವನೆ.

462. ವಚನಾಮೃತ—ಅಮೃತದಂತಿರುವ ಮಾತು.

463. ನಿಂದೆ—ದೂಷಣೆ. ಪೊರ್ದದ—ಹೊದ್ದದ.

465. ಸೈತು—ಸುಮ್ಮನೆ. ಮಾಗಿಯಕೋಗಿಲೆಯಂತಿಹುದು—ಮಾಗಿಯಕಾಲದ ಕೋಗಿಲೆಯ ಹಾಗೆ ಮೌನವಾಗಿರುವುದು.

466. ಕುಡದವನ—ದಾನಮಾಡದವನ. ಲುಬ್ಧಕನ—ಲೋಭಿಯ.

467. ಸಲೆ—ಸೇರಲು.

468. ಅನುವ ಸ್ವಭಾವವನ್ನು.

469. ಬವರ—ಯುದ್ಧ. ಸಲ್ಲದ—ಅಯೋಗ್ಯವಾದ. ಅಲ್ಲದ—ಆಪತ್ತಿಗಾಗದ. ಹೊಲ್ಲಹವ—ಕೆಟ್ಟದನ್ನು.

470. ಸುಖಂಬಾಳ್ವೆ—ಸುಖವಾಗಿ ಬಾಳುವೆನು.

## 36. ಸೋಮೇಶ್ವರ ಶತಕ.

471. ಪಳ್ಳ—ಹಳ್ಳ.

472. ಇರಿಯಲ್ ಬಲ್ಲೊಡೆ—ಸಂಹಾರಮಾಡುವ ಶಕ್ತಿಯಿದ್ದರೆ. ತೆರಬಲ್ಲರ್—ತಾನೇ ತೀರಿಸುವ ಶಕ್ತಿಯುಳ್ಳವರು, ಹೊಣೆಯಾಗಬೇಕು.

473. ಸತ್ಪಾತ್ರಕಂ—ಯೋಗ್ಯನಾದ ಮನುಷ್ಯನಿಗೆ.

474. ಮಡೆಯ—ಬೆಪ್ಪ. ಬೆಟ್ಟ—ಇಲ್ಲಿ—ಬೆಟ್ಟದಂತೆ ಕಷ್ಟವಾದುದು. ಜಪದೇಹಿ—ಸೋಮಾರಿ. ಉಜ್ಜುಗ—ಉದ್ಯೋಗ, ಪ್ರಯತ್ನ. ಋಣ—ಸಾಲ. ಇಡೆ—ಅನ್ನವಿಕ್ಕುವುದು.

475. ಕೈಯಾಸೆ—ಲಂಚದಾಸೆ. ನಿರ್ಭೀತ—ಭಯವಿಲ್ಲದವನು.

476. ದೊರೆ—ಸಮಾನ. ಪಾಷಾಣ—ಕಲ್ಲು. ಪಸುರ್ಪಾವು—ಹಸುರು ಹಾವು.

477. ಸಾಧ್ವೀತ್ವದ—ಪಾತಿವ್ರತ್ಯವುಳ್ಳ. ವರ್ಣಮಾತ್ರಂ—ಒಂದು ಅಕ್ಷರವನ್ನು.

478. ಅರ್ಭಕ—ಮಗು. ಊಡಿಸು—ತಿನ್ನಿಸು.

479. ಆರಣ್ಯಕಪಕ್ಷಿ=ಕಾಡು ಪಕ್ಕಿ. ಗೊಡ್ಡಾಗಲ್=ಹಣ್ಣು ಬಿಡದಿರಲು. ಪುಸಿ=ಸುಳ್ಳು. ದಾತರು=ದಾನಮಾಡುವವರು.

480. ಉಡುರಾಜ=ನಕ್ಷತ್ರಗಳಿಗೆ ಧೊರೆಯಾದ ಚಂದ್ರ. ನ್ಯಗ್ರೋಧ=ಆಲದ ಮರ. ಎಳಗರುಂ=ಎಳದು + ಕರು + ಉಂ. ಮಿಡಿ=ಹೀಚುಕಾಯಿ.

481. ಮಣಿಯುಂ=ಬಗ್ಗಿಯೂ. ತೃಣಮೇ=ಹುಲ್ಲು ಕಡ್ಡಿಯೇ. ಪರ್ವತಪಲ್ಲವೇ=ಪರ್ವತದಂತೆ ದೊಡ್ಡದಾದ ಸಹಾಯವಲ್ಲವೇ.

482. ಜಾಹ್ನವಿ=ಗಂಗೆ. ವಸನ=ಬಟ್ಟೆ. ವೆಗ್ಗಳ=ಶ್ರೇಷ್ಠ. ಗ್ರಹ=ಅಂಗಾರಕ ಮೊದಲಾದ ಗ್ರಹಗಳು.

484. ಉರುಧೀಸಂಪನ್ನ=ಹೆಚ್ಚಾದ ಬುದ್ಧಿಯುಳ್ಳವನು. ಚತುರೋಪಾಯ=ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳು; ವ್ಯಾಕರಣದ ಪ್ರಕಾರ ಇದು 'ಚತುರುಪಾಯ' ಎಂದಾಗಬೇಕು.

485. ಸುರೆ=ಹೆಂಡ.

486. ಪೊಡೆಯೊಳ್=ಹೊಟ್ಟೆಯಲ್ಲಿ. ಪಂಕ=ಕೆಸರು. ಗುಡಪಾನ=ಬೆಲ್ಲದ ಪಾನಕ.

487. ಲಕ್ಷ್ಮೀಕಟಾಕ್ಷ = ಲಕ್ಷ್ಮೀದೇವಿಯ ಕಡೆಗಣ್ಣಿನ ನೋಟ, ಐಶ್ವರ್ಯ.

489. ತೇಳ್=ಚೇಳು. ಖಗ=ಪಕ್ಷಿ; ಹೇಗೆ?

490. ಮುಕುರ=ಕನ್ನಡಿ.

## 37. ನೀತಿಸಾರ.

491. ಅಧೋಗತಿ=ನರಕ.

492. ಕಡೆಗಣಿಸಿ=ಅಲಕ್ಷ್ಯಮಾಡಿ.

493. ಬಿಕ್ಕು=ಬಿಕ್ಕಲು ಮಾತಾಡುವುದು. ನಕ್ಕದೆ=ಅಕ್ಷರಗಳನ್ನು ಕಡಿದು ಉಚ್ಚರಿಸದೆ. ಬಣಿತೆ=ಮಾತು.

494. ಗಮಕಿ=ಚೆನ್ನಾಗಿ ಓದುವವನು.

495. ಬೆಸಗೊಳ್ಳದೆ=ಕೇಳದೆ. ಕಲ್ಲೆದೆತನದಿಂದ=ಕಠಿನತೆಯಿಂದ.

496. ಮೂಕೊರೆಯು=ಮೂಗುಪರಕ.

497. ಅರಿತ=ಜ್ಞಾನ.

498. ಪದಾಭರಣ=ಕಾಲಿಗೆ ಆಭರಣ.

500. ಎಡೆಯಾಡಿಸಿ=ಸುತ್ತಿಸಿ.

501. ಮೊರುಡು=ಒರೆಪ್ರೋರೆ, ಮೊರಡಾಗಿರುವುದು.

502. ಸಾಲದೆ=ಸಾಲಮಾಡಿಕೊಳ್ಳದೆ. ನಿಚ್ಚಪಯಣ=ನಿತ್ಯವೂ ಪ್ರಯಾಣ.

505. ಪಳಿಗೆ=ದೂಷಣೆಗೆ. ಈಡುಮಾಳ್ಪುದಂ=ಆಸ್ಪದ ಮಾಡುವುದನ್ನು. ಪರಗತಿವಿಲಯಾಸ್ಪದಮಂ=ಮುಂದಣಗತಿ ಕೆಡಿಸುವಂತಹುದನ್ನು.

506. ಆವು_ಹಸು. ಗಾವಿಲರು–ಏನು ಅರಿಯದವರು; ಇಲ್ಲಿ_ಕೆಟ್ಟವರು.

511. ಕತದಿಂ=ಸಲುವಾಗಿ, ಕಾರಣದಿಂದ.

## 38. ಹದಿಬದೆಯ ಧರ್ಮ.

513. ಒತ್ತಿನುಡಿಯದೆ=ಮನಸ್ಸಿಗೆ ನೋವು ಉಂಟಾಗುವಂತೆ ಹೇಳುವುದನ್ನೇ ಹೇಳದೆ. ಒತ್ತರಿಸದೆ=ಹೇಳಿದ ಮಾತನ್ನು ತಳ್ಳಿಹಾಕದೆ. ಅಣತಿ=ಆಜ್ಞೆ. ಎಸಗುವುದು=ಮಾಡುವುದು.

514. ಅವಮತಿಗೆಯ್ಯದೆ=ಅವಮಾನ ಮಾಡದೆ. ಮತ್ತೆಯಾಗದೆ=ಮದದಿಂದ ಕೊಬ್ಬಿ ಹೋಗದೆ.

515. ಮೂಗುವಡದೆ=ಮೂಗಿಯ ಹಾಗೆ ಮಾತನಾಡದಿರದೆ. ಮೋಡಿ=ಹಟ. ಲೋಗರು=ಜನರು.

516. ಮದುಪರು=ಮದುಕರು. ಎದೆಗೊಳಿಸುವುದು=ಹೃದಯಕ್ಕೆ ಒಪ್ಪಿಕೊಳ್ಳುವಂತೆ ಮಾಡಿಕೊಳ್ಳುವುದು.

517. ಕುತ್ತವೆಣಿಸಿ=ಇಲ್ಲಿ—ತಪ್ಪೆಣಿಸಿ. ಕೂರ್ತು=ಪ್ರೀತಿಸಿ. ತೆತ್ತಿಗರು = ನೆಂಟರು. ಪತ್ತುಗೆಗೊಳಿಸಿ = ಹೊಂದಿಕೆ ಮಾಡಿ, ಸೇರಿಸಿ.

518. ವಿೂಹ = ನೀರು ಎರೆಸುಕೊಳ್ಳುವುದು.

519. ಹಮುಗಿಸದೆ = ಭಯಪಡಿಸದೆ. ಮೆರುಕ = ಪ್ರೀತಿ.

520. ಮಿಸಿಸುವುದು = ಸ್ನಾನ ಮಾಡಿಸುವುದು, ಎರೆವುದು.

521. ಹಸುಮಕ್ಕಳು = ಎಳೆಯ ಮಕ್ಕಳು.

522. ಮೊದಲಿಸದೆ = ಮುಯ್ಯಾಡಿ ಹಂಗಿಸದೆ.

523. ಬೇನೆವಡೆದರ = ರೋಗಿಗಳನ್ನು. ಪಯುನುಗಳ = ಪಸುಗಳನ್ನು ಓವುವುದು = ರಕ್ಷಿಸುವುದು.

524. ಬೀಳುಗಳೆವರು = ಹೀಯಾಳಿಸುವರು.

525. ಸವನಿಪುದು = ಉಂಟಾಗುವುದು.

527. ಅಲೆಗೆಯ್ಯದ = ತೊಂದರೆಪಡಿಸದ.

528. ಪತ್ತುಗೆ = ಸಂಬಂಧ. ನೇಹ = ಸ್ನೇಹ. ಜವ್ವನ = ಪ್ರಾಯ. ನಡೆವೆಣ = ಓಡಾಡುವ ಹೆಣ, ಜೀವಚ್ಛವ.

529. ಗಾಂಪ = ಬೆಪ್ಪ. ಬಲುಬವಣಿಗೊಂಬವ = ಬಲುವಾಗಿ ಪೇಚಾಡುವವನು.

530. ಮಂದಿವಾಳ = ಜನಗಳು, ಸಾಮಾನ್ಯ ಜನರು. ನೀಕರಿಸು = ಧಿಕ್ಕರಿಸು.

531. ತನೆರವರು = ತವರು ಮನೆಯವರು, ಹೆತ್ತ ಮನೆಯವರು.

532. ಮೊನೆವಾತು = ಕ್ರೂರವಾದ ಮಾತು. ಅಳಲುವೆ = ದುಃಖಪಡುವೆ

535. ಎರವು = ಭೇದ.

536. ತೋಟಿ = ಜಗಳ. ಬೂತಾಟ = ಹೊರಗಣ ವೇಷ. ಬೂಟಾಟ.

537. ಪರಿವುದು = ಕತ್ತರಿಸಿ ಹೋಗುವುದು. ಜಂಪು = ಸೊಂಪು.

540. ಮೊಳದೋರಿ = ಮೊಳಕೆ ಹೊರಟು ಕೆಟ್ಟುಹೋಗಿ.

541. ಅಲ್ಲದವರು = ಆಗದವರು. ಪುಳಿತ = ಹುಳುಬಿದ್ದ.

542. ಅಲಸದೆ = ಪಾಲುಮಾರದೆ.

543. ತೊಣ್ಡುವೆಣ್ಗಳ್ = ಕಟ್ಟುನಿಟ್ಟಿಲ್ಲದೆ ತಿರುಗುವ ಹೆಣ್ಣುಮಕ್ಕಳ. ನೇಹದೊಡಕು = ಸ್ನೇಹವೆಂಬ ಗೋಜು. ಲಣ್ಡೆವೆಣ್ಗಳ್ = ನೀಚಸ್ತ್ರೀಯರು. ಪೊರ್ದುಗೆವಡೆಯದೆ = ಹೊದ್ದಿಕೆಯಾಗಿ ರದೆ.

## 39. ಪುಷ್ಪಾಪಚಯ.

544. ಜಲರುಹಾಕರ = ಸರಸ್ಸು.

545. ಆರವೆ = ಆರಾಮ, ತೋಟ. ದಳ = ಎಲೆ. ವಿಟಪ = ಮರದ ಕೊಂಬೆ.

546. ಕುಡಿವೆಳಗು = ಕುಡಿಯಂತೆ ಬಾಗಿರುವ ಕಣ್ಣಿನ ಕಾಂತಿ. ನಿಡುಗೊಂಬು = ಉದ್ದವಾದ ಕೊಂಬೆ. ಅಡಸಿಪಿಡಿದು = ಬಲವಾಗಿ ಹಿಡಿದುಕೊಂಡು. ನಿಮಿರ್ದು = ನೀಡಿ. ಕರಜ = ಉಗುರು; ಹೇಗೆ ?

548. ಕುಳಿರ್ವ = ತಣ್ಣಗಿರುವ. ಚಳಿಯಂಗೊಟ್ಟು = ಚಿಮುಕಿಸಿ. ಸುಯ್ಗಂಪು = ಉಸಿರಿನ ವಾಸನೆ. ಕೈಗೆಂಪು = ಕೆಂಪಗಿರುವ ಕೈಯ ಬಣ್ಣವು. ಬರಸುತಿರೆ = ತೊಡೆದುಬಿಡುತ್ತಿರಲು.

549. ಕರ್ಣಾವತಂಸ = ಕಿವಿಯ ಮೇಲೆ ಇಟ್ಟುಕೊಳ್ಳುವ ಪುಷ್ಪಾಭರಣ. ಸುರಯಿ = ಸುರಗಿ ಕರ್ಣಿಕ = ಹೂವಿನ ಮಧ್ಯದಲ್ಲಿರುವ ದಿಂಡು. ಬಂದುಗೆ—ತ್ಸ—ಬಂಧೂಕ.

550. ಸಜ್ಜಕ = ಮೊಗ್ಗು. ಗೊಜ್ಜಗೆ = ಸೇವಂತಿಗೆ. ಅಜ್ಜಗೆ = ಇರುವಂತಿಗೆ, ತ್ಸ.—ಅರ್ಜಕ. ಪಜ್ಜಳಿಸುವ = ಪ್ರಕಾಶಿಸುವ. ಬಜ್ಜರ—ತ್ಸ.—ವಜ್ರ. ಬಾಪುರಿ = ತೋಳಬಳೆ.

551. ಅಲಂಪು = ಸೌಂದರ್ಯ, ಸೌಖ್ಯ. ಮೇಖಲೆ = ಡಾಬು. ಇಂಪಡರ್ದ = ಮಾಧುರ್ಯವೇರಿದ, ಸವಿಯಾದ. ಹೊಸಜೌವನೆಯರು = ಆಗತಾನೆ ಯೌವನ ಬರುತ್ತಿರುವ ಹೆಣ್ಣುಮಕ್ಕಳು.

552. ತವೆ = ವಿಶೇಷವಾಗಿ. ಆವರಿಸಿ = ಬಳಸಿಕೊಂಡು. ಗಾವರಿಸಿ = ಕೂಗುತ್ತಾ.

553. ತಣ್ಬೆಳಗು = ತಣ್ಣಗಿರುವ ಬೆಳಕು.

554. ನನೆ = ಮೊಗ್ಗು. ಕಡೆ = ಬಾಣ. ಸುಗಿಯೆ = ಭಯಪಡಲು. ಒಂದೆಕೊಡೆಯಿನಾಳ್ದು = ಏಕಚಕ್ರಾಧಿಪತ್ಯದಿಂದ ಆಳಿ.

555. ಕಾವಣ = ಚಪ್ಪರ : ತ್ಸ.—ಕಾಯಮಾನ. ಪಳುಕುವಸದ = ಸ್ಪಟಿಕ ಶಿಲೆಯಿಂದ ಮಾಡಿದ.

556. ಜಕ್ಕವಕ್ಕಿ = ಚಕ್ರವಾಕಪಕ್ಷಿ.

557. ಮಿಳಿರ್ವ = ಅಲುಗುತ್ತಿರುವ. ಕಾಲ = ಕಾಲುವೆಯ. ಕರ್ಬುಗೋ‌ಲ = ಕಬ್ಬಿನ ಜಲ್ಲೆಯ.

558. ಬಿನದ = ತ್ಸ.—ವಿನೋದ. ಬಟ್ಟದಲೆಯ = ಗುಂಡಾದ ತಲೆಯುಳ್ಳ ರೂಡಿವಡೆದ = ಪ್ರಸಿದ್ಧವಾದ.

559. ಸೂಡಿ = ಮುಡಿದುಕೊಂಡು. ಕೂರ್ಮೆ = ಪ್ರೀತಿ. ಕಾವಂ + ಒಡನೆ = ಕಾವನೊಡನೆ : ಕಾವಂ = ಮನ್ಮಥನು.

560. ಪಾಡಂ = ಹಾಡನ್ನು. ಪೊಳ್ತು = ಹೊತ್ತು, ಕಾಲ. ಎಸೆಯುತುಂ = ಪ್ರಕಾಶಿಸುತ್ತ



WD 2043—GBP—15,000—17-8-23